ಭಾರತೀಯ ಸಾಹಿತ್ಯದ ನಿರ್ಮಾಣಕಾರರು

# ಕುಮಾರನ್ ಆಶಾನ್

ಲೇಖಕರು :

ಕೆ. ಎಂ. ಜಾರ್ಜ್

ಭಾಷಾಂತರ :

ಎ. ಎಸ್. ಕೆದಿಲಾಯ



ಸಾಹಿತ್ಯ ಅಕಾದೆಮಿ

ಹೊಸ ದೆಹಲಿ

# ಪರಿವಿಡಿ

# 1. ಬಡತನದಿಂದ ಆರಂಭ

ಸ್ವಾಮಿ ವಿವೇಕಾನಂದರು 1892 ರಲ್ಲಿ ಕೇರಳವನ್ನು ಸಂದರ್ಶಿಸಿದಾಗ ಅದೊಂದು ಹುಚ್ಚರ ಉತ್ತಮ ಧರ್ಮಶಾಲೆಯೆಂದು ಹೇಳಿದರಂತೆ. ಅಷ್ಟೊಂದು ಜಾತಿಮತ ವೈಷಮ್ಯಗಳು ಅಲ್ಲಿ ತುಂಬಿದ್ದುವು. ವಿಶ್ವ ಬಂಧುತ್ವವನ್ನು ಸ್ಥಾಪಿಸಬೇಕೆಂದು ಪ್ರಯತ್ನಿಸುತ್ತಿದ್ದ ಆ ಮಹಾತ್ಮನಲ್ಲಿ ಕೇರಳದಲ್ಲಿ ಪ್ರಚಲಿತವಾಗಿದ್ದ ಅಸ್ಪೃಶ್ಯತೆಯೂ ಅಸಾಮಿಪ್ಯತೆಯೂ ಅಸಹ್ಯತೆಯನ್ನು ಹುಟ್ಟಿಸಿರಬೇಕು. ನಿರಾಶೆಯನ್ನು ಉಂಟು ಮಾಡಿರಬೇಕು. ಹೀಗಾಗಿಯೇ ಮೇಲಿನ ಅವಹೇಳನವು ಅಂತಹ ಶಕ್ತಿಯುತವಾದ ಹಾಗೂ ಔಚಿತ್ಯಪೂರ್ಣವಾದ ಖಂಡನೆಯಾಯಿತು. ಒಹುಶಃ ಕೊಂಚ ಸೌಮ್ಯವಾದ ರೀತಿಯಲ್ಲಾದರೂ ಈ ರೀತಿಯ ಖಂಡನೆಯು ದೇಶದ ಇತರ ಪ್ರದೇಶಗಳಿಗೂ ಅನ್ವಯಿಸಬಹುದು.

ಸಮಾಜದ ನಿಚ್ಚಣಿಕೆಯಲ್ಲಿ ಅತ್ಯುನ್ನತವಾದ ಮತ್ತು ಅತಿನೀಚವಾದ ಬ್ರಾಹ್ಮಣ ಮತ್ತು ಹರಿಜನರೆಂಬ ಜಾತಿಗಳ ನಡುವೆ ಅನೇಕ ಜಾತಿಗಳೂ ಉಪಜಾತಿಗಳೂ ಇವೆ. ಹಿಂದುಳಿದ ಜಾತಿಗಳು, ಸಮುಉದಿತ ಜಾತಿಗಳು, ಸಮೂದಿತ ವಂಶಗಳು ಎಂಬ ಸ್ಥೂಲ ವಿಭಾಗಗಳಲ್ಲಿ ಒಳ ಉಪಜಾತಿಗಳು ಅನೇಕವಿವೆ. ಎಳವ ವರ್ಗವು (ಇವರಿಗೆ ತೀಯ ಎಂಬ ಹೆಸರೂ ಇದೆ) ಕೇರಳದ ಅತಿಪ್ರಮುಖ ವರ್ಗಗಳಲ್ಲಿ ಒಂದಾಗಿದ್ದರೂ, ಹಿಂದುಳಿದುದೆಂದು ಪರಿಗಣಿತವಾಗಿದೆ. ಕಳೆದ ಮೂರು ನಾಲ್ಕು ದಶಕಗಳಲ್ಲಿ ಈ ವರ್ಗವು ಸಾಕಷ್ಟು ಮುಂದು ಬಂದಿದೆ. ಆದರೆ ಸ್ವಾಮಿ ವಿವೇಕಾನಂದರು ಕೇರಳಕ್ಕೆ ಬಂದಾಗ ಈ ವರ್ಗವು ಹಿಂದುಳಿದ ವರ್ಗವಾಗಿಯೇ ಇತ್ತು. ನಮ್ಮ ಪ್ರಬಂಧದ ನಾಯಕನಾದ ಕುಮಾರನ್ ಆಶಾನ್ ಈ ವರ್ಗದಲ್ಲಿ ಜನಿಸಿದವನು.

ಕಾಯಿಕ್ಕರ ಎಂಬುದು ತಿರುವನಂತಪುರದಿಂದ ಮೂವತ್ತು ಮೈಲು ದೂರದಲ್ಲಿರುವ ಒಂದು ಸಣ್ಣ ಹಳ್ಳಿ. ಈ ಹಳ್ಳಿಯ ಒಂದು ಬದಿಯಲ್ಲಿ ಪಡುಗಡಲೂ ಇನ್ನೊಂದು ಬದಿಯಲ್ಲಿ ಅಂಚುತೆಂಗು ಸರೋವರವೂ ಇದೆ. ಉಸುಬಿನಿಂದ ಕೂಡಿದ ಈ ಗ್ರಾಮ ಪ್ರದೇಶವು ಕರಾವಳಿಯಂತೆ ತೆಂಗಿನ ಮರಗಳ ಸಮೃದ್ಧಿಯನ್ನು ಹೊಂದಿದೆ. ಈ ಹಳ್ಳಿಯ ನಿವಾಸಿಗಳು ಸರಳಜೀವಿಗಳು. ಅವರಲ್ಲಿ ಹೆಚ್ಚಿನವರು ಎಳವ ವರ್ಗದವರು. ತಮ್ಮ ಕುಟುಂಬ ಪೋಷಣೆಗಾಗಿ ಶ್ರಮಜೀವನವನ್ನು ಅವರು ಕೈಕೊಳ್ಳಬೇಕಾಗಿತ್ತು. ಕೇರಳದ ಅತ್ಯಂತ ಶ್ರೇಷ್ಠ ಆಧುನಿಕ ಕವಿಗಳಲ್ಲಿ ಒಬ್ಬನಾದ ಕುಮಾರನ್ ಆಶಾನನಿಗೆ ಈ ಗ್ರಾಮವು ಜನ್ಮಕೊಡದೆ ಇದ್ದಿದ್ದರೆ ಇದೂ ಕೇರಳದ ಇತರ ನೂರಾರು ಗ್ರಾಮಗಳಂತೆ ಅಜ್ಞಾತವಾಗಿಯೇ ಇರುತ್ತಿತ್ತು. ಈಗ

ಮಲಯಾಳ ಸಾಹಿತ್ಯದ ಸ್ಥೂಲ ಪರಿಚಯವುಳ್ಳ ಪ್ರತಿಯೊಬ್ಬನೂ ಈ ಸ್ಥಳವು ಈ ಮಹಾಕವಿಗೆ ಸಂಬಂಧಿಸಿದುದರಿಂದ ಇದನ್ನು ಪವಿತ್ರವೆಂದೂ ಸಂದರ್ಶನ ಯೋಗ್ಯವೆಂದೂ ಪರಿಗಣಿಸುವನು. ಈ ಮನೋಭಾವಕ್ಕೆ ಬೆಲೆಕೊಟ್ಟೇ ಸಾರ್ವಜನಿಕರು ಇತ್ತೀಚೆಗೆ ಇಲ್ಲಿ ಸ್ಮಾರಕ ಕಟ್ಟಡವೊಂದನ್ನು ರಚಿಸಿದ್ದಾರೆ. ಈ ಮಹಾಕವಿಯ ಸ್ಮಾರಕಾರ್ಥವಾಗಿ ಪ್ರತಿವರ್ಷ ಸಾಹಿತ್ಯ ಸಮ್ಮೇಳನವನ್ನೂ ಇಲ್ಲಿ ನಡೆಸುತ್ತಿದ್ದಾರೆ.

ಕುಮಾರನ್ ಆಶಾನನು ಮಲಯಾಳ ಶಕ 1848 ರ ಮೇಷ 2 ರಲ್ಲಿ ಚಿತ್ರಾ ಪೌರ್ಣಮಿಯ ದಿನ ಜನಿಸಿದನು. ಈ ದಿನ ಕ್ರಿ. ಶ. 1873 ರ ಎಪ್ರಿಲ್ 12 ಕ್ಕೆ ಸರಿ ಬರುತ್ತದೆ. ಜ್ಯೋತಿಷ್ಯದಲ್ಲಿ ನಂಬಿಕೆ ಇರುವವರು ಚಿತ್ರಾ ಪೌರ್ಣಮಿಯ ದಿನದಲ್ಲಿ ಸಂಭವಿಸಿದ ಜನನವು ಬಹು ಭಾಗ್ಯಪ್ರದವೆಂದು ಹೇಳುವರು. ಒಬ್ಬನ ಭಾಗ್ಯಕ್ಕೆ ಕಾರಣ ಅವನ ನಕ್ಷತ್ರವೋ ಅಥವಾ ಅವನ ಸತತ ಪ್ರಯತ್ನವೋ ಎಂಬುದು ವಿಚಾರಾರ್ಹವಾದ ವಿಷಯ. ಆ ವಿಷಯ ನಾವೀಗ ತಲೆಹಾಕುವ ಅಗತ್ಯವಿಲ್ಲ. ಆಶಾನನ ತಂದೆ ನಾರಾಯಣನ್‌ನ ಮುಖ್ಯ ಕಸಬು ಹುರಿಹಗ್ಗ, ಕೊಬರಿ ಮತ್ತಿಂತಹ ಸಾಮಾನುಗಳ ವ್ಯಾಪಾರ. ಆತನಿಗೆ ಸಂಗೀತದಲ್ಲಿ ಸೂಕ್ಷ್ಮವಾದ ಅಭಿರುಚಿ ಇತ್ತು. ಇದಲ್ಲದೆ ಮಲಯಾಳ ಮತ್ತು ತಮಿಳು ಭಾಷೆಗಳ ಉತ್ತಮ ಜ್ಞಾನವೂ ಇತ್ತು. ಆತನು ತನ್ನ ಗ್ರಾಮದ ಅಭಿವೃದ್ಧಿಯಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸುತ್ತಿದ್ದನು. ಕಾಯಿಕ್ಕರದಲ್ಲಿ ಪ್ರಾಥಮಿಕ ಶಾಲೆಯೊಂದನ್ನು ತೆರೆಯಲು ಆತನೇ ಮುಖ್ಯ ಕಾರಣ. ಆಶಾನನ ತಾಯಿ ಕಾಳಿಯಮ್ಮ. ಆಕೆಯ ಸಮೀಪ ಬಂಧುಗಳು ಆಕೆಯನ್ನು ಕೊಚ್ಚು ಪೆಣ್ಣು ಎಂದೂ ಕರೆಯುತ್ತಿದ್ದರು. ಆಕೆ ಶಾಲೆಗೆ ಹೋಗಿ ವಿದ್ಯೆಯನ್ನೇನೂ ಕಲಿತಿರಲಿಲ್ಲ. ಆದರೂ ಪುರಾಣ ಕಥೆಗಳೆಲ್ಲಾ ಆಕೆಗೆ ತಿಳಿದಿದ್ದುವು. ಅವನ್ನು ಮಕ್ಕಳಿಗೆ ಆಕೆಯು ಹೇಳುತ್ತಿದ್ದಳು. ಆಕೆಯು ತೊಮ್ಮನ್ ವಿಳಾಕಂ ಎಂಬ ಮನೆಗೆ ಸೇರಿದವಳು. ದಯಾರ್ದ್ರ ಹೃದಯಿಯಾದ ಆಕೆಯಲ್ಲಿ ತುಂಬಾ ದೈವಭಕ್ತಿ ಇತ್ತು.

ಕುಮಾರನ್ ಆಶಾನನು ನಾರಾಯಣನ್ ಮತ್ತು ಕಾಳಿಯಮ್ಮಯರ ದ್ವಿತೀಯ ಪುತ್ರ. ಅವರಿಗೆ ಇನ್ನೂ ಆರು ಗಂಡುಮಕ್ಕಳೂ ಇಬ್ಬರು ಹೆಣ್ಣುಮಕ್ಕಳೂ ಇದ್ದರು. ಇಬ್ಬರು ಗಂಡುಮಕ್ಕಳೂ ಒಬ್ಬಳು ಮಗಳೂ ಬಾಲ್ಯದಲ್ಲಿಯೇ ಮೃತರಾದರು. ಜ್ಯೇಷ್ಠಪುತ್ರನಾದ ಕೃಷ್ಣನ್ ಮನೆಕೆಲಸಗಳಲ್ಲಿಯೂ, ತಮ್ಮ ಸಣ್ಣ ವ್ಯಾಪಾರವನ್ನು ನಡೆಸುವುದರಲ್ಲಿಯೂ ತಂದೆಗೆ ಸಹಾಯ ಮಾಡುತ್ತಿದ್ದನು. ಹೆತ್ತವರು ತೀರಿ ಹೋದ ಮೇಲೆ ಆತನೇ ಕುಟುಂಬದ ಪ್ರತಿಯೊಬ್ಬರ ಕ್ಷೇಮಭಾರವನ್ನು ವಹಿಸಿದನು. ಕುಮಾರನ್‌ನ (ಕುಮಾರು ಎಂದೂ ಆತನನ್ನು ಮನೆಯವರು ಮುದ್ದಿನಿಂದ ಕರೆಯುತ್ತಿದ್ದರು) ಸಮೀಪದ ತಮ್ಮನಾದ ಕೊಚ್ಚು ಶಂಕರನು ತನ್ನ ಜೀವಮಾನವಿಡೀ ಅವಿವಾಹಿತನಾಗಿಯೇ ಉಳಿದನು. ಆತನಿಗೆ ಲೌಕಿಕ ಆಸಕ್ತಿಗಳಾವುವೂ ಇರಲಿಲ್ಲ. ಗೋವಿಂದನ್ ಮತ್ತು ಶೇಖರನ್ ಎಂಬ ಉಳಿದ ಇಬ್ಬರು ಸೋದರರು ಅಧ್ಯಾಪಕರಾದರು.

ಅಂದಿನ ಕಾಲದಲ್ಲಿ ಮಕ್ಕಳನ್ನು ಮೊದಲು ಕುಡಿಪ್ಪಳ್ಳಿಕೂಡಮ್ ಎಂದು ಕರೆಯುತ್ತಿದ್ದ ಹಳ್ಳಿಶಾಲೆಗೆ ಕಳುಹಿಸುತ್ತಿದ್ದರು. ಕುಡಿ ಎಂದರೆ ಗುಡಿಸಲು ಅಥವಾ

ವಾಸಸ್ಥಳ. ಪಳ್ಳಿಕೂಡಮ್ ಎಂದರೆ ಶಾಲೆ. ವಾಸ್ತವವಾಗಿ ಇಂತಹ ಶಾಲೆಗಳು ಹುಲ್ಲಿನ ಗುಡಿಸಲುಗಳಲ್ಲಿ ನಡೆಯುತ್ತಿದ್ದುವು. ಅಲ್ಲಿ ಇರುತ್ತಿದ್ದುದು ಆಶಾನ್ ಎಂದು ಕರೆಯಲ್ಪಡುತ್ತಿದ್ದ ಒಬ್ಬ ಅಧ್ಯಾಪಕ. ಆತನು ಸುಮಾರು ಇಪ್ಪತ್ತೈದು ಮೂವತ್ತು ಮಕ್ಕಳಿಗೆ ಓದು ಬರಹ ಲೆಕ್ಕಗಳನ್ನು ಕಲಿಸಬೇಕಾಗಿತ್ತು. ಸ್ಲೇಟು ಪೆನ್ಸಿಲುಗಳೆಂದರೆ ಆ ಕಾಲದಲ್ಲಿ ಸಿರಿವಂತಿಕೆಯ ಲಕ್ಷಣಗಳಾಗಿದ್ದುವು. ಅವು ನಾಲ್ಕು ತರಗತಿಗಳಿರುವ ಪ್ರಾಥಮಿಕ ಶಾಲೆಗಳವರೆಗೆ ಮಾತ್ರ ಮೀಸಲಾಗಿದ್ದುವು. ಕೆಲ ಮಕ್ಕಳು ಹಳ್ಳಿಶಾಲೆಗಳಲ್ಲಿಯೇ ತಮ್ಮ ವಿದ್ಯಾಭ್ಯಾಸವನ್ನು ನಿಲ್ಲಿಸುತ್ತಿದ್ದರು. ಉಳಿದ ಕೆಲವರು ಪ್ರಾಥಮಿಕ ಶಾಲೆಗಳಲ್ಲಿ ತಮ್ಮ ಶಿಕ್ಷಣವನ್ನು ಮುಂದುವರಿಸುತ್ತಿದ್ದರು. ಹಳ್ಳಿ ಶಾಲೆಗಳಲ್ಲಿ ಮಕ್ಕಳು ಕುಳಿತುಕೊಳ್ಳಲು ತಡುಕ್ಕುಗಳೆಂದು ಕರೆಯಲ್ಪಡುತ್ತಿದ್ದ ತಮ್ಮ ಸ್ವಂತ ಚೌಕದ ಚಾಪೆಗಳನ್ನು ತರುತ್ತಿದ್ದರು. ಆಶಾನನಿಗೆ ಒರಗುವ ಹಲಗೆಯಿರುವ ಮರದ ತಗ್ಗಿನ ಕಾಲುಮಣೆಯೊಂದು ಇರುತ್ತಿತ್ತು. ಕೆಲವರಿಗೆ ಮಾತ್ರ ಚಿತ್ರ, ಲೇಖನಿ, ಮತ್ತಿತರ ಅಮೂಲ್ಯ ಸ್ವತ್ತುಗಳನ್ನಿಟ್ಟುಕೊಳ್ಳಲು ಮರದ ಪೆಟ್ಟಿಗೆಯ ಶ್ರೀಮಂತಿಕೆಯಿದ್ದುದೂ ಉಂಟು. ವರ್ಣಮಾಲೆಯ ಅಕ್ಷರಗಳು ತಾಲಪತ್ರದಲ್ಲಿ ಬರೆಯಲಾಗುತ್ತಿದ್ದುವು. ಮಕ್ಕಳು ತಮ್ಮೆದುರಿಗೆ ನೆಲದಲ್ಲಿ ಹರಡಿದ್ದ ನಯವಾದ ಹೊಯಿಗೆಯ ಮೇಲೆ ತೋರು ಬೆರಳಿನಿಂದ ಬರೆಯುತ್ತಿದ್ದರು. ಹೀಗೆ ಅವರು ವರ್ಣಮಾಲೆಯನ್ನೂ ಮಗ್ಗಿ ಕೋಷ್ಟಕಗಳನ್ನೂ ಕಲಿಯುತ್ತಿದ್ದರು.

ಕುಮಾರನ್‌ನು ತನ್ನ ಏಳನೇ ವರ್ಷದಲ್ಲಿ ಇಂತಹ ಶಾಲೆಯೊಂದನ್ನು ಸೇರಿದನು. ಅವನ ಅಧ್ಯಾಪಕ ತುಂಡತ್ತಿಲ್ ಆಶಾನ್ ಎಂಬವನು. ಆತನು ವೈದ್ಯ, ಮಾಟ ಮತ್ತು ಜ್ಯೋತಿಷ್ಯಗಳಲ್ಲಿಯೂ ಪರಿಣತನು. ಶ್ರದ್ಧೆಯಿಂದ ಕಲಿಯುತ್ತಿದ್ದ ವಿದ್ಯಾರ್ಥಿಯಾಗಿದ್ದುದರಿಂದ ಕುಮಾರನ್ ಆಶಾನನು ಬೆತ್ತದ ರುಚಿಯನ್ನು ಹೆಚ್ಚಾಗಿ ನವಿಯಲಿಲ್ಲ. ಈ ಹಳ್ಳಿಶಾಲೆಯಲ್ಲಿ ಒಂದು ವರ್ಷ ಕಲಿತ ಮೇಲೆ ಕುಮಾರನ್‌ನು ಸುಪ್ರಸಿದ್ಧ ವೈದ್ಯನೂ ಸಂಸ್ಕೃತ ವಿದ್ವಾಂಸನೂ ಆದ ಕೊಚ್ಚುರಾಮನ್ ವೈದ್ಯನ ಶಿಷ್ಯನಾದನು. ಈ ಗುರುವಿನಿಂದ ಆತನು ಅಮರಕೋಶ, ಸಿದ್ಧರೂಪ, ಶ್ರೀರಾಮೋದಂತ, ಕೃಷ್ಣವಿಲಾಸ ಮತ್ತು ರಘುವಂಶಗಳಲ್ಲಿ ಪಾಠ ಹೇಳಿಸಿಕೊಂಡನು. ಇವಲ್ಲದೆ ಇನ್ನೂ ಕ್ಲಿಷ್ಟವಾದ ಮಾಘಕಾವ್ಯದ ಒಂದಂಶದ ಪಾಠವೂ ಈತನಿಗೆ ನಡೆಯಿತು. ಆದರೆ ಈ ಶಿಷ್ಯವೃತ್ತಿ ನಡೆದುದು ಕೂಡ ಸ್ವಲ್ಪಕಾಲ ಮಾತ್ರ. ಇದಕ್ಕೆ ಕಾರಣ ಆ ಗುರುವು ಅಧ್ಯಾಪಕವೃತ್ತಿಯನ್ನು ಬಿಟ್ಟು ಹೆಚ್ಚು ವರಮಾನ ಬರುವ ವೈದ್ಯವೃತ್ತಿಯನ್ನು ಅವಲಂಬಿಸಿದುದೇ ಆಗಿದೆ. ಕೊಚ್ಚುರಾಮನ್ ವೈದ್ಯನು ಆಯುರ್ವೇದ ವೈದ್ಯವೃತ್ತಿಯಲ್ಲಿ ಯಶಸ್ಸನ್ನು ಗಳಿಸಿದನು. ಆದರೆ ಕುಮಾರನ್ ಮನೆಯಲ್ಲಿಯೇ ಉಳಿದು ಒಂದು ವರ್ಷ ವ್ಯರ್ಥ ಕಳೆಯಬೇಕಾಯಿತು.

ಈ ಸಮಯದಲ್ಲಿ ಕುಮಾರನ್‌ನ ತಂದೆಯೂ ಮತ್ತಿತರರೂ ಸರಕಾರಕ್ಕೆ ಮನವಿಮಾಡಿಕೊಂಡು ಆ ಹಳ್ಳಿಯಲ್ಲಿ ಪ್ರಾಥಮಿಕ ಶಾಲೆಯೊಂದನ್ನು ತೆರೆಯಲು ಅನುಮತಿಯನ್ನು ಪಡೆದರು. ಸರಕಾರದ ಮಂಜೂರಾತಿಯನ್ನು ಪಡೆದ ಶಾಲೆಯಲ್ಲಿ ಕ್ರಮವಾದ ಶಿಕ್ಷಣವನ್ನು ಪಡೆಯಲು ಕುಮಾರನ್‌ನಿಗೆ ಇದರಿಂದ ತುಂಬಾ

ಅನುಕೂಲವಾಯಿತು. ಈ ಶಾಲೆಯಲ್ಲಿ ಅವನಿಗೆ ಕಲಿಯಲಿಕ್ಕಿದ್ದುದು ಸುಮಾರು ಮೂರು ವರ್ಷ ಮಾತ್ರ. ತನ್ನ ಹದಿನಾಲ್ಕನೇ ವರ್ಷದಲ್ಲಿಯೇ ಆತನು ಈ ಶಾಲೆಯ ಮೇಲಿನ ತರಗತಿಯಲ್ಲಿ ಉಚ್ಚಮಟ್ಟದಲ್ಲಿ ಉತ್ತೀರ್ಣನಾಗಿ ತನ್ನ ಶಿಕ್ಷಣವನ್ನು ಮುಗಿಸಿದನು. ಅದೇ ವರ್ಷ ಆತನು ತನ್ನ ಹದಿನಾಲ್ಕನೇ ವರ್ಷದಲ್ಲಿಯೇ ಅದೇ ಶಾಲೆಯಲ್ಲಿ ಅಧ್ಯಾಪಕನಾಗಿ ನೇಮಕಹೊಂದಿದನು. ಇಷ್ಟೊಂದು ಸಣ್ಣ ಪ್ರಾಯದಲ್ಲಿ ಅಧ್ಯಾಪಕನಾಗಿ ನೇಮಕಹೊಂದಿದುದು ಆತನ ಮೇಲೆ ಇತರರಿಗಿದ್ದ ನಂಬಿಕೆ ವಿಶ್ವಾಸಗಳನ್ನು ಸೂಚಿಸುತ್ತವೆ. ಅಧಿಕೃತ ಶಾಲೆಯಲ್ಲಿ ಅಧ್ಯಾಪಕನಾಗಲು ಕನಿಷ್ಠ ವಾದರೂ ಹದಿನೆಂಟು ವರ್ಷವಾಗಿರಬೇಕಾದುದರಿಂದ ಆತನು ಕೆಲವೇ ತಿಂಗಳು ಗಳಿಗಿಂತ ಹೆಚ್ಚು ಆ ಶಾಲೆಯಲ್ಲಿರಲಾಗಲಿಲ್ಲ.

ಕುಮಾರನ್ ಆಮೇಲೆ ಒಬ್ಬ ರಖಂ ವ್ಯಾಪಾರಿಯ ಕೆಳಗೆ ಗುಮಾಸ್ತನಾಗಿ ಸೇರಿದನು. ಈ ಕೆಲಸಕ್ಕೆ ಸೇರಿದುದು ಮುಂದೆ ಕಲಿಯುವ ಮನಸ್ಸಿಲ್ಲದೆ ಅಲ್ಲ. ಆದರೆ ಆತನಿಗೆ ಸೇರದೆ ಬೇರೆ ದಾರಿ ಇರಲಿಲ್ಲ. ಈ ಸಮಯದಲ್ಲಿ ಕುಮಾರನ್ ಓದುವ ಆಸಕ್ತಿಯನ್ನು ಹೆಚ್ಚಿಸಿಕೊಂಡಿದ್ದನು. ತನಗೆ ದೊರೆತ ಪುಸ್ತಕಗಳನ್ನೆಲ್ಲಾ ಓದಿ ಆತನು ಅರಗಿಸಿಕೊಳ್ಳುತ್ತಿದ್ದನು. ಆತನಿಗೆ ತನ್ನ ಶಿಕ್ಷಣವನ್ನು ಮುಂದುವರಿಸಬೇಕೆಂದು ತುಂಬಾ ಆಶೆ ಇತ್ತು, ಆದರೆ ತಂದೆಗೆ ಮಗನು ಏನಾದರೂ ಉದ್ಯೋಗವನ್ನು ಮಾಡಿ ಕುಟುಂಬ ಭಾರವನ್ನು ವಹಿಸುವಲ್ಲಿ ಭಾಗಿಯಾಗಬೇಕೆಂಬ ಬಯಕೆ ಇತ್ತು. ಒಮ್ಮೆ ಕುಮಾರನ್ ತಂದೆಯನ್ನು ವಿರೋಧಿಸಿ ಮನೆ ಬಿಟ್ಟು ತನ್ನ ಅಜ್ಜನಲ್ಲಿಗೆ ಹೋದನು. ಆದರೆ ಆತನ ತಾಯಿಯು ಅಲ್ಲಿಗೂ ಬಂದಳು. ಆಕೆಯು ಒತ್ತಾಯವೂ ತನ್ನ ಶಿಕ್ಷಣವನ್ನು ಮುಂದರಿಸಬೇಕೆಂಬ ಕುಮಾರನ್‌ನ ಹಂಬಲವನ್ನು ಕಡಮೆ ಮಾಡಲಿಲ್ಲ. ಕೊನೆಗೆ ಕುಮಾರನ್‌ನನ್ನು ಉದ್ಯೋಗಕ್ಕಿಟ್ಟುಕೊಂಡವನೇ ಆತನ ತಂದೆಯೊಡನೆ ಮಾತನಾಡಿ ಆತನನ್ನು ಒಪ್ಪಿಸಿದನು. ಆಮೇಲೆ ಕುಮಾರನ್ ಹೊಸತಾಗಿ ಆರಂಭಿಸಿದ್ದ ವಿಜ್ಞಾನ ಸಂದಾಯಿನಿ ಎಂಬ ಸಂಸ್ಕೃತಶಾಲೆಯನ್ನು ಸೇರಿದನು. ಆಗ ಆತನಿಗೆ ಹದಿನಾರು ವರ್ಷ. ಹುಡುಗನ ಕಲಿಯುವ ಆಸಕ್ತಿಯನ್ನೂ ತಂದೆಯ ಬಡತನವನ್ನೂ ನೋಡಿದ ಆಚಾರ್ಯನು ಕುಮಾರನ್‌ನಿಂದ ವಿದ್ಯಾರ್ಥಿ ಶುಲ್ಕವೇನನ್ನೂ ತೆಗೆದುಕೊಳ್ಳಲಿಲ್ಲ.

ಕುಮಾರನ್ ಬಾಲ್ಯದಲ್ಲಿ ತುಂಟ ಹುಡುಗನಾಗಿದ್ದನು. ಆತನ ಹುಡುಗಾಟದ ಸ್ವಭಾವವನ್ನು ಕುರಿತು ಕೆಲಕತೆಗಳು ಆತನ ಹುಟ್ಟೂರಿನಲ್ಲಿ ಈಗಲೂ ಪ್ರಚಾರದಲ್ಲಿವೆ. ಅವುಗಳಲ್ಲಿ ಕೆಲವನ್ನು ಆತನ ಜೀವನ ಚರಿತೆಗಳಲ್ಲಿ ದಾಖಲೆ ಮಾಡಲಾಗಿದೆ. ಗಾತ್ರದಲ್ಲಿ ತುಸು ಗಿಡ್ಡವಾಗಿದ್ದರೂ ಆತನು ಸುಲಭವಾಗಿ ತನ್ನ ಜೊತೆಗಾರರನ್ನು ಈಜಾಟದಲ್ಲಿ ಸೋಲಿಸಬಲ್ಲವನಾಗಿದ್ದನು. ಆತನು ಸರೋವರದಲ್ಲಿಯೂ ಸಮುದ್ರದಲ್ಲಿಯೂ ಈಜಾಡುತ್ತಿದ್ದನು. ಮೀನು ಹಿಡಿಯುವುದರಲ್ಲಿಯೂ ಅವನಿಗೆ ಆಸಕ್ತಿ ಇತ್ತು. ಒಮ್ಮೆ ಗಾಳದ ದಾರವನ್ನು ತುಂಡುಮಾಡಿ ಮೀನು ತಪ್ಪಿಸಿಕೊಂಡು ನೀರಿನಲ್ಲಿ ಧಾವಿಸಿ ದಾಗ, ಸ್ನೇಹಿತರು ತಡೆಯುತ್ತಿದ್ದರೂ ಕೇಳದೆ, ನೀರಿನಲ್ಲಿ ದುಮುಕಿ ಆ ಮೀನನ್ನು ಆತ ಬೆನ್ನಟ್ಟಿದ. ಆತನನ್ನು ಎಂದೂ ಸೋಲಿಸಲಾಗುತ್ತಿರಲಿಲ್ಲ. ಆತನು ಒಂದು

ವಿಷಯದಲ್ಲಿ ಮನಹರಿಸಿದನೆಂದರೆ ಅದನ್ನು ಎಂದಿಗೂ ಬಿಟ್ಟುಬಿಡುತ್ತಿರಲಿಲ್ಲ. ಅಂತಹ ಮನೋದಾರ್ಢ್ಯವು ಆತನಿಗಿತ್ತು.

ಸಂಸ್ಕೃತಶಾಲೆಯನ್ನು ಸೇರಿದಾಗ ಕುಮಾರನನು ಶ್ರದ್ಧಾವಂತನೂ ಮಹತ್ವಾಕಾಂಕ್ಷಿಯೂ ಆದ ವಿದ್ಯಾರ್ಥಿಯಾಗಿದ್ದನು. ಆತನು ಪದ್ಯರಚನೆಯಲ್ಲಿ ತೊಡಗಿ, ಅದರಲ್ಲಿ ತುಂಬಾ ಯಶಸ್ವಿಯಾದನು. ಅಷ್ಟು ಸಣ್ಣ ಪ್ರಾಯದಲ್ಲೂ ಆತನು ತನ್ನ ಕವಿತ್ವದಿಂದ ಪರಿಗಣಿತನಾಗಿದ್ದನೆಂಬುದು ಸುಪ್ರಸಿದ್ಧ ಕವಿ ಮೂಳೂರ್ ಪದ್ಮನಾಭ ಪಣಿಕ್ಕರನ ಕವಿರಾಮಾಯಣದ ಒಂದು ಶ್ಲೋಕದಿಂದ ತಿಳಿದುಬರುತ್ತದೆ. ಕವಿರಾಮಾಯಣವು ವಿವಿಧ ಕವಿತ್ವಗಳಿಗೆ ಹೆಸರುವಾಸಿಯಾಗಿದ್ದ ಕುಂಞಿಕುಟ್ಟನ್ ತಂಬುರಾನ್ ಎಂಬವನು ಬರೆದ ಕವಿಭಾರತದ ಮುಖ್ಯ ಭಾಗವಾಗಿ ಬರೆದುದಾಗಿತ್ತು. ಕವಿಭಾರತದ ರಚನೆಯ ಉದ್ದೇಶ ಕೇರಳದ ಮುಖ್ಯ ಕವಿಗಳನ್ನು ಮಹಾಭಾರತದ ಪಾತ್ರಗಳಾಗಿ ಪರಿಚಯಮಾಡಿಕೊಡುವುದಾಗಿತ್ತು. ಆ ಗೌರವವನ್ನು ಪಡೆಯಲು ಅರ್ಹರಾದ ಕೆಲಕವಿಗಳು ಎಳವರಲ್ಲಿದ್ದರೂ ತಂಬುರಾನನು ಅವರನ್ನು ಪರಿಗಣಿಸಲಿಲ್ಲ. ಪ್ರಸಿದ್ಧ ಕವಿಯಾದ ಮೂಳೂರ್ ಪದ್ಮನಾಭ ಪಣಿಕ್ಕರನನ್ನೇ ಅದರಲ್ಲಿ ಸೇರಿಸಿರಲಿಲ್ಲ. ಆದುದರಿಂದ ಆತನು ಕವಿ ರಾಮಾಯಣವನ್ನು ರಚಿಸಿ ತನ್ನ ಆಯ್ಕೆಯ ಕವಿಗಳನ್ನು ಅದರಲ್ಲಿ ಪರಿಚಯಮಾಡಿಸಿದನು. ಈ ಕವಿಗಳಲ್ಲಿ ಕೆ. ಎನ್. ಕುಮಾರನ್‌ನನ್ನೂ ಆತನು ಹೆಸರಿಸಿದ್ದಾನೆ. ಕುಮಾರನ್‌ನನ್ನು ಗವಯ (ಕಪಿ ಮುಖಂಡ) ನನ್ನಾಗಿ ಆ ಕಾವ್ಯದಲ್ಲಿ ನಿರೂಪಿಸಿದ್ದಾನೆ. ಆಶಾನನು ಆಗ ಕುಮಾರನ್‌ನೆಂದೇ ಪ್ರಸಿದ್ಧನಾಗಿದ್ದನು.

ವಿಜ್ಞಾನ ಸಂದಾಯಿನಿ ಎಂಬ ಸಂಸ್ಕೃತಶಾಲೆಯನ್ನು ಸುಪ್ರಸಿದ್ಧ ಸಂಸ್ಕೃತ ವಿದ್ವಾಂಸನೂ ಅಧ್ಯಾಪಕನೂ ಆದ ಮನಂಪೂರ್ ಗೋವಿಂದನ್ ಆಶಾನ್ ಎಂಬವನು ನಡೆಸುತ್ತಿದ್ದನು. ಒಂದು ವರ್ಷದೊಳಗಾಗಿಯೇ ಕುಮಾರನ್ ಅಲ್ಲಿ ಮಾಘ, ನೈಷಧ, ಶಾಕುಂತಳ ಮತ್ತು ಸುಪ್ರಸಿದ್ಧ ಅಲಂಕಾರ ಗ್ರಂಥವಾದ ಕುವಲಯಾನಂದಗಳನ್ನು ಕಲಿತು ಮುಗಿಸಿದನು. ಪದ್ಯರಚನೆಯನ್ನು ಶಾಲೆಯಲ್ಲಿ ಕ್ರಮಬದ್ಧವಾಗಿ ಅಭ್ಯಾಸಮಾಡಿಸುತ್ತಿದ್ದರು. ಕುಮಾರನ್ ಘಂಟೆಯೊಂದಕ್ಕೆ ಹದಿನೈದರಿಂದ ಇಪ್ಪತ್ತು ಶ್ಲೋಕಗಳವರೆಗೆ ರಚಿಸಲು ಶಕ್ತನಾಗಿದ್ದನು. ಇದರ ಮುಖ್ಯ ಉದ್ದೇಶ ಛಂದೋದೋಷಗಳಿಲ್ಲದಂತೆ ಪದ್ಯ ರಚಿಸುವ ಪ್ರಾವೀಣ್ಯವನ್ನು ಪಡೆಯುವುದೇ ಆಗಿತ್ತು ಎಂದು ಕುಮಾರನ್ ಆಮೇಲೆ ಹೇಳುತ್ತಿದ್ದನು. ಈ ಅಭ್ಯಾಸದಲ್ಲಿ ಅರ್ಥಕ್ಕಾಗಲಿ ಶೈಲಿಗಾಗಲಿ ಗಮನವನ್ನೇ ಕೊಡುತ್ತಿರಲಿಲ್ಲ. ಪದ್ಯರಚಕನು ಬಾಹ್ಯಸಾಧನಗಳನ್ನು ಮಾತ್ರ ಲಕ್ಷ್ಯದಲ್ಲಿಟ್ಟುಕೊಳ್ಳುತ್ತಿದ್ದುದೇ ಇದಕ್ಕೆ ಕಾರಣ.

ಕುಮಾರನ್ ರಚಿಸಿದುದು ಈ ಶ್ಲೋಕಗಳು ಮಾತ್ರವಲ್ಲ. ಅವನು ಜಾನಪದ ಹಾಡಿನಂತಿರುವ ವಳ್ಳೀ ವಿವಾಹವೆಂಬ ಕೃತಿಯನ್ನೂ ಉಷಾಕಲ್ಯಾಣವೆಂಬ ಒಂದು ನಾಟಕವನ್ನೂ ರಚಿಸಿದನು. ಉಷಾಕಲ್ಯಾಣವನ್ನು ಅಲ್ಲಿನ ತರುಣರು ಹಲಬಾರಿ ರಂಗದಲ್ಲಿ ಪ್ರದರ್ಶಿಸಿದ್ದರು. ಇದರಿಂದಲೇ ಆ ತರುಣಕವಿಯ ಪ್ರಸಿದ್ಧಿಯನ್ನು ಊಹಿಸಬಹುದು.

ಗೋವಿಂದನ್ ಆಶಾನನಲ್ಲಿ ಎರಡು ವರ್ಷ ಕಲಿತ ಮೇಲೆ ಕುಮಾರನ್ ಆತನನ್ನು ಬೀಳ್ಕೊಟ್ಟನು. ತಾನು ಕಲಿಸಲಿದ್ದುದನ್ನೆಲ್ಲಾ ಕಲಿಸಿಯಾಯಿತು ಎಂದು ಆ ಅಧ್ಯಾಪಕನು ಅವನಿಗೆ ಹೇಳಿದನಂತೆ. ಶಾಕುಂತಲವನ್ನು ಕಲಿಸುತ್ತಿದ್ದಾಗ ಒಂದು ಪದ್ಯದ ಸೂಚ್ಯಾರ್ಥದ ಕುರಿತು ಗುರುಶಿಷ್ಯರೊಳಗೆ ವಾದ ನಡೆಯಿತಂತೆ. ಅದರಲ್ಲಿ ಶಿಷ್ಯನದೇ ಮೇಲುಗೈಯಾಯಿತು. ಕುಮಾರನ್‌ಗೆ ಆಗ ಕೇವಲ ಹದಿನೆಂಟು ವರ್ಷ.

## 2. ಸ್ವಾಮಿ ಮತ್ತು ಚಿನ್ನಸ್ವಾಮಿ

ಕೇರಳದಲ್ಲಿ ಎಳವ ಸಮಾಜ ಶೀಘ್ರವಾಗಿ ಸುಧಾರಿತವಾಗುತ್ತಿರುವ ಸಮಾಜ. ಎಳವರು ಕೇರಳದ ಜನಸಂಖ್ಯೆಯ ಸೇಕಡಾ ಮೂವತ್ತರಷ್ಟು ಇದ್ದಾರೆ. ಅವರನ್ನು ಇಂದೂ ಹಿಂದುಳಿದ ವರ್ಗದವರೆಂದು ಪರಿಗಣಿಸಲಾಗುತ್ತಿದೆ. ಆದರೆ ಒಂದು ಶತಮಾನದ ಹಿಂದಿನ ಅವರ ಸ್ಥಿತಿಗೂ ಇಂದಿನ ಸ್ಥಿತಿಗೂ ಹೋಲಿಕೆಯೇ ಇಲ್ಲದಷ್ಟು ಬದಲಾವಣೆಯಾಗಿಬಿಟ್ಟಿದೆ. ಸಮಾಜದಲ್ಲಿ ಅವರಿಗೆ ಹಲವು ಅನಾನುಕೂಲತೆಗಳು ಇದ್ದುವು. ಅವರನ್ನು ಶಾಲೆಗಳಿಗೆ ತೆಗೆದುಕೊಳ್ಳುತ್ತಿರಲಿಲ್ಲ. ದೇವಾಲಯಗಳ ಸಮೀಪದ ಕೆಲವು ರಸ್ತೆಗಳಲ್ಲಿಯೂ ಅವರಿಗೆ ಪ್ರವೇಶವಿರಲಿಲ್ಲ. ಸರಕಾರಿ ಹುದ್ದೆಗಳೆಲ್ಲಾ ಮೇಲು ಜಾತಿಯವರಿಗೇ ಮೀಸಲಾಗಿದ್ದುವು. ಎಳವರು ತಮ್ಮ ಸಾಂಪ್ರದಾಯಿಕ ಕಸಬುಗಳಾದ ಕಳ್ಳು ತೆಗೆಯುವುದು, ಬೇಸಾಯ ಮಾಡುವುದು, ನೇಯುವುದು ಮೊದಲಾದ ಉದ್ಯೋಗಗಳನ್ನೇ ಮಾಡುತ್ತಿರಬೇಕೆಂದು ಆ ಉತ್ತಮಜಾತಿಯವರಲ್ಲಿ ಪ್ರಚಲಿತವಾಗಿದ್ದ ಅಭಿಪ್ರಾಯವಾಗಿತ್ತು. ತಿರುವಾಂಕೂರು ಕೊಚ್ಚಿಗಳಲ್ಲಿ ಪರಿಸ್ಥಿತಿ ಇನ್ನಷ್ಟು ಚಿಂತಾಜನಕವಾಗಿತ್ತು. ಸರಕಾರಿ ಶಾಲೆಗಳಿಗೂ ಸರಕಾರಿ ಉದ್ಯೋಗಗಳಿಗೂ ಪ್ರವೇಶದ ಹಕ್ಕನ್ನು ಪ್ರಾರ್ಥಿಸಿಕೊಂಡು ಹದಿಮೂರು ಸಾವಿರ ಎಳವರ ಸಹಿಗಳನ್ನೊಳಕೊಂಡ ಒಂದು ಮನವಿಯನ್ನು 1896ರಲ್ಲಿ ತಿರುವಾಂಕೂರಿನ ಮಹಾರಾಜರಿಗೆ ಸಮರ್ಪಿಸಲಾಯಿತು. ಈ ಮನವಿಯು ಹಿಂತಿರುಗಿ ಬಂತು. ಇದರೊಂದಿಗಿದ್ದ ಪರಾದಲ್ಲಿ ಎಳವರಿಗೆ ವಿದ್ಯಾಭ್ಯಾದಲ್ಲಾಗಲಿ ಸರಕಾರಿ ನೌಕರಿಗಳಲ್ಲಾಗಲಿ ಮನಸ್ಸಿಲ್ಲವೆಂದೂ ಅವರು ತಮ್ಮ ಪರಂಪರಾಗತ ಉದ್ಯೋಗಗಳಲ್ಲಿ ತೃಪ್ತರಾಗಿರುವರೆಂದೂ ಸೂಚಿಸಲಾಗಿದ್ದಿತು. ಇದನ್ನು ನೋಡಿದರೆ ಆ ಮನವಿಯನ್ನೇ ನಂಬಿರಲಿಲ್ಲವೆಂದು ವ್ಯಕ್ತವಾಗುವಂತಿತ್ತು.

ಎಳವ ಸಮಾಜವು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ತುಂಬಾ ಅನ್ಯಾಯಕ್ಕೊಳಗಾಗಿತ್ತು. ಇದಕ್ಕಿಂತಲೂ ಹೆಚ್ಚಿನ ಅನ್ಯಾಯಕ್ಕೊಳಗಾದ ಇತರ ವರ್ಗಗಳೂ ಇದ್ದುವೆಂಬುದು ನಿಜ. ಆದರೆ ತಮಗಾದ ಅನ್ಯಾಯದ ಅರಿವು

ಹೆಚ್ಚಾಗಿ ತಿಳಿದಿದ್ದುದು ಎಳವಮುಖಂಡರಿಗೆ. ಇಂತಹ ಸನ್ನಿವೇಶದಲ್ಲಿ ಈ ಅನ್ಯಾಯದಿಂದ ಬಿಡುಗಡೆ ಹೊಂದಿಸಲು ನಾರಾಯಣಗುರು (1856-1927) ಆ ಸಮಾಜದ ದಿಗಂತದಲ್ಲಿ ಮೂಡಿದ. ಆತನು ಆಧ್ಯಾತ್ಮಿಕ ಗುರುವೆಂದು ಸುಪ್ರಸಿದ್ಧನಾಗಿದ್ದರೂ ಆತನ ಧ್ಯೇಯ ಧಾರ್ಮಿಕೋನ್ನತಿ ಮಾತ್ರವಾಗಿದ್ದಿಲ್ಲ. ಶೈಕ್ಷಣಿಕ ಸಾಮಾಜಿಕ ಸುಧಾರಣೆಗಳೂ ಆತನ ಧ್ಯೇಯಗಳಲ್ಲಿ ಸೇರಿದ್ದುವು. ಆತನು ಎಳವ ವರ್ಗಕ್ಕೆ ಸೇರಿದವನಾಗಿದ್ದರೂ ನಾನಾ ರೀತಿಯ ಅನಾನುಕೂಲತೆಗಳಲ್ಲಿ ಸಿಕ್ಕಿಬಿದ್ದಿದ್ದ ಎಲ್ಲಾ ವರ್ಗಗಳ ಬಿಡುಗಡೆಗಾಗಿಯೂ ಆತನು ಹೋರಾಡಿದನು. ಹಿಂದುಗಳ ಶಾಸ್ತ್ರಾನುಸಾರವಾಗಿ ಶೂದ್ರರಿಗೆ ಸನ್ಯಾಸಾಶ್ರಮ ಸ್ವೀಕಾರದ ಅಧಿಕಾರವಿದ್ದಿಲ್ಲ. ಅವರ್ಣೀಯರ ವಿಷಯದಲ್ಲಾದರೋ ಅದು ಸಾಧ್ಯವೇ ಇಲ್ಲದ ಮಾತು. ನಾರಾಯಣ ಗುರು ಎಳವರಿಗೆ ಅರ್ಚನೆಮಾಡಲು ಅನುಕೂಲಿಸುವಂತೆ ಕೇರಳದ ಹಲವೆಡೆಗಳಲ್ಲಿ ಮಂದಿರಗಳನ್ನು ಸ್ಥಾಪಿಸಿದನು. ಈ ಮಂದಿರಗಳಿಗೆ ಪ್ರವೇಶಿಸಲು ಹೊಲೆಯರನ್ನೂ ಹರಿಜನರೆಂದು ಈಗ ಕರೆಯಲ್ಪಡುವ ಇತರ ಕೀಳು ಜಾತಿಯವರನ್ನೂ ಅನುಮತಿಸಿದನು. ಶಿವಮಂದಿರದಲ್ಲಿ ವಿಗ್ರಹಪ್ರತಿಷ್ಠೆಯ ಅಧಿಕಾರ ಆತನಿಗಿದೆಯೇ ಎಂದು ಕೆಲವರು ಪ್ರಶ್ನಿಸಿದಾಗ, ಆತನು ತಾನು 'ಬ್ರಾಹ್ಮಣ ಶಿವ'ನನ್ನು ಪ್ರತಿಷ್ಠಿಸುವುದಿಲ್ಲವೆಂದೂ 'ಎಳವ' ಶಿವನನ್ನು ಪ್ರತಿಷ್ಠಿಸುವುದಾಗಿಯೂ ಉತ್ತರವಿತ್ತನು. 'ಒಂದೇ ಜಾತಿ, ಒಂದೇ ಮತ, ಒಂದೇ ದೇವರು' ಎಂಬ ಆತನ ಘೋಷಣೆಯೇ ಆಮೇಲೆ ಸಮಾಜದಲ್ಲಾದ ದೊಡ್ಡ ಕ್ರಾಂತಿಗೆ ಬೀಜರೂಪವಾಗಿತ್ತು. ಯಾವುದೇ ವ್ಯಕ್ತಿಗೆ ಅಥವಾ ವರ್ಗಕ್ಕೆ ವಿಶೇಷ ಹಕ್ಕುಗಳಿವೆ ಎಂಬ ಅಭಿಪ್ರಾಯವನ್ನು ಇದು ಉರುಳಿಸಿತು. ಆ ಸಮಾಜಕ್ಕೆ ಬಲವಾಗಿ ಅಂಟಿದ್ದ ಅನೇಕ ಅಂಧ ಶ್ರದ್ಧೆಗಳನ್ನಳಿಸಲೂ, ವಿವಾಹಕ್ಕೆ ಸಂಬಂಧಿಸಿದ ಕೆಲವು ಅರ್ಥಶೂನ್ಯಪದ್ಧತಿಗಳನ್ನು ತೆಗೆದುಹಾಕಲೂ ಆತನು ಹೋರಾಟ ನಡೆಸಿದನು. ಆತನು ದೊಡ್ಡ ಸಮಾಜ ಕ್ರಾಂತಿಕಾರ. ಆದರೂ ಗಂಭೀರವಾಗಿ ಪ್ರಶಾಂತನಾಗಿ ಯಾವಾಗಲೂ ಆತನಿರುತ್ತಿದ್ದನು. ಸರಳತೆಯನ್ನು ಮಾನವ ರೂಪದಲ್ಲಿ ಕೆತ್ತಿದಂತಿತ್ತು ಆತನ ಇರವು. ನಾರಾಯಣಗುರುವನ್ನು ಎಷ್ಟೊಂದು ಗೌರವದಿಂದ ಜನ ಕಾಣುತ್ತಿದ್ದರೆಂಬುದಕ್ಕೆ ಆತನನ್ನು ಸದಾ ಸಂಬೋಧಿಸುತ್ತಿದ್ದ ಸ್ವಾಮಿ ಎಂಬ ಪದವೇ ನಿದರ್ಶನ.

ಸ್ವಾಮಿಯ ಸ್ಫೂರ್ತಿಯ ಆಶ್ರಯದಲ್ಲಿ 'ಶ್ರೀ ನಾರಾಯಣ ಧರ್ಮಪರಿಪಾಲನ ಯೋಗ'ವು 1903 ರ ಮೇ 15 ರಲ್ಲಿ ಅಸ್ತಿತ್ವಕ್ಕೆ ಬಂತು. ಈ ಸಂಸ್ಥೆಗೆ ಎಸ್. ಎನ್. ಡಿ.ಪಿ. ಯೋಗವೆಂಬ ಹೆಸರೇ ಬಳಕೆಗೆ ಬಂದಿದೆ. ಚದರಿಹೋಗಿ ದುರ್ಬಲವಾಗಿದ್ದ ಸಮಾಜದ ಸುಸಂಘಟನೆಗೂ ಅದರ ಆರ್ಥಿಕ ಮತ್ತು ಸಾಮಾಜಿಕ ಸುಧಾರಣೆಗಳಿಗೂ ಈ ಸಂಸ್ಥೆಯೇ ಬಲವಾದ ಕಾರಣವಾಗಿದೆ. ಈ ಸಂಸ್ಥೆಯ ಕೇಂದ್ರ ವ್ಯಕ್ತಿ ಸ್ವಾಮಿಯೇ ಎಂಬುದರಲ್ಲಿ ಸಂಶಯವೆಳ್ಳಷ್ಟೂ ಇಲ್ಲ. ಸ್ವಾಮಿಯು 1928 ರಲ್ಲಿ ಸಮಾಧಿಯನ್ನು ಹೊಂದುವ ತನಕ ಇಪ್ಪತ್ತೈದು ವರ್ಷಗಳ ಕಾಲ ಅವಿರತವಾಗಿ ದುಡಿದನು. ಅವನ ಆಧ್ಯಾತ್ಮಿಕ ಶಕ್ತಿ ಇಂದೂ ಕೂಡ ಆ 'ಯೋಗ'ವನ್ನು ವ್ಯಾಪಿಸಿ ಅದಕ್ಕೆ ದಾರಿ ತೋರುತ್ತಲಿದೆ. ಅರ್ಧಶತಮಾನದ ಹಿಂದೆ ಎಳವರಲ್ಲಿ ಐದುಮಂದಿ ಕೂಡ ಪದವೀ

ಧರರು ಇರಲಿಲ್ಲ. ಈಗ ಉಚ್ಚ ಶಿಕ್ಷಣವನ್ನು ಪಡೆದು ಜವಾಬ್ದಾರೀ ಹುದ್ದೆಗಳಲ್ಲಿ ಸಾವಿರಾರು ಮಂದಿ ಎಳವರಿದ್ದಾರೆ. ಎಸ್. ಎನ್. ಡಿ. ಪಿ. ಯೋಗವು ತನ್ನ ಆಡಳಿತದಲ್ಲಿ ಅನೇಕ ಶಾಲೆ ಕಾಲೇಜುಗಳನ್ನು ನಡೆಸುತ್ತಿದೆ. ನಾರಾಯಣಗುರುವಿನ ಪ್ರಭಾವದ ನೆಳಲಲ್ಲಿ ಈ ಸಮಾಜವು ಹೇಗೆ ಅಭಿವೃದ್ಧಿಯನ್ನು ಹೊಂದಿದೆ ಎಂಬುದಕ್ಕೆ ಇದೇ ನಿದರ್ಶನ.

ಹಲವು ವ್ಯಕ್ತಿಗಳು ಸ್ವಾಮಿಯ ಜೀವಿತಕಾಲದಲ್ಲಿ ಅವನಿಂದ ನೇರವಾಗಿಯೇ ಪ್ರಭಾವಿತರಾಗಿದ್ದರು. ಅವರಲ್ಲಿ ಅತ್ಯಂತ ಹೆಚ್ಚು ಪ್ರಭಾವಿತನಾದವನೆಂದರೆ ಕುಮಾರನ್ ಆಶಾನ್. ನಾರಾಯಣಗುರುವನ್ನು ಮೊದಲಬಾರಿಗೆ ಕಂಡಾಗ ಕುಮಾರನ್ ಆಶಾನನಿಗೆ ವಯಸ್ಸು ಹದಿನೆಂಟು ಮಾತ್ರ. ಗುರುವಿಗಾಗ ಮೂವತ್ತಾರು ವರ್ಷ. ಆತನನ್ನಾಗಲೇ ಅಸಾಧಾರಣ ಯೋಗಿಯೊಬ್ಬನೆಂದು ಜನರು ತಿಳಿದಿದ್ದರೂ ತನ್ನ ಕೊನೆಯ ಕಾಲದಲ್ಲಿದ್ದ ಕೀರ್ತಿ ಶಿಖರದ ಎತ್ತರಕ್ಕೆ ಆತನಿನ್ನೂ ಮುಟ್ಟಿರಲಿಲ್ಲ. ಹಾಗಿದ್ದರೂ ಕುಮಾರನ್ ಗುರುವಿನಿಂದ ಬಲವಾಗಿ ಆಕರ್ಷಿತನಾದನು. ಗುರುವೂ ಆತನನ್ನು ಮೆಚ್ಚಿದನು. ಆತನು ಕುಮಾರನ್‌ನ ಉಜ್ವಲ ಭವಿಷ್ಯವನ್ನು ಊಹಿಸಿದ್ದಿರಬೇಕು. ಇವರಿಬ್ಬರ ಮೊದಲ ಭೇಟಿಯು ರಾಮಕೃಷ್ಣ ನರೇಂದ್ರರ (ಈ ನರೇಂದ್ರನೇ ಆ ಮೇಲೆ ವಿವೇಕಾನಂದನೆಂದು ಪ್ರಸಿದ್ಧನಾದುದು) ಮೊದಲ ಸಂದರ್ಶನದಂತಿತ್ತು. ಎಳೆವಯಸ್ಸಿನ ಕುಮಾರನ್‌ನ ಜೀವನದಲ್ಲಿ ಅದೊಂದು ಮಹತ್ವದ ಘಟ್ಟ. ಈ ಭೇಟಿಯಿಂದ ಪರಸ್ಪರ ಪ್ರಯೋಜನ ದೊರೆತುದು ಮಾತ್ರವಲ್ಲ. ಇಡೀ ಸಮಾಜಕ್ಕೆ. ಹೆಚ್ಚೇಕೆ, ನಾಗರಿಕ ಜೀವನದಲ್ಲಿ ಆಸಕ್ತಿ ಇರುವ ಕೇರಳದ ಜನತೆಗೇ ಲಾಭವಾಯಿತು.

ಹಿಂದೆ ಹೇಳಿದಂತೆಯೇ ಕುಮಾರನ್ ಹದಿನೆಂಟು ವರ್ಷದವನಾದಾಗ ಆತನ ಸಾಂಪ್ರದಾಯಿಕ ಶಿಕ್ಷಣವೂ ಮುಗಿಯಿತು. ಆದರೂ ಆತನು ಶ್ರದ್ಧಾವಂತ ಉತ್ತಮ ವಿದ್ಯಾರ್ಥಿಯಾಗಿದ್ದುದರಿಂದ ಆತನ ಓದುವಿಕೆಯೂ ಸ್ವಾಧ್ಯಾಯವೂ ಅವಿರತವಾಗಿ ಮುಂದರಿದುವು. ತಾನು ಓದಿದುದನ್ನೆಲ್ಲಾ ಆತನು ಜೀರ್ಣಿಸಿಕೊಳ್ಳುತ್ತಿದ್ದನು. ತಮಿಳು ಸಂಸ್ಕೃತಗಳಲ್ಲಿ ಆತನಿಗೆ ವಿಶೇಷ ಅಭಿರುಚಿ ಇತ್ತು. ತನ್ನ ಮಾತೃಭಾಷೆಯಾದ ಮಲಯಾಳದಲ್ಲಿ ಆತನು ಕೆಲವು ಭಕ್ತಿಗೀತಗಳನ್ನು ಬರೆದನು. ಆಶಾನನ ಪೂರ್ಣಕೃತಿಗಳ ಮೂರನೇ ಸಂಪುಟದಲ್ಲಿ ಸೇರಿಸಿರುವ ಸುಬ್ರಹ್ಮಣ್ಯ ಶತಕವೂ ಭಕ್ತವಿಲಾಪವೂ ಈ ಸಂದರ್ಭದಲ್ಲಿ ಆತನು ಬರೆದ ಕವಿತೆಗಳು. ಕುಮಾರನ್‌ನ ಕವಿತೆಗಳನ್ನು ಸ್ವಾಮಿಯು ಮೆಚ್ಚುಗೆಯಿಂದ ಕೇಳುತ್ತಿದ್ದನಂತೆ. ಆತನು ಕುಮಾರನ್‌ನನ್ನು ಪ್ರೋತ್ಸಾಹಿಸಿದನು. ಅದೇ ಸಂದರ್ಭದಲ್ಲಿ ಆತನ ಕವಿತೆಯಲ್ಲಿ ಶೃಂಗಾರರಸಕ್ಕೆ ಹೆಚ್ಚಿನ ಪ್ರಾಧಾನ್ಯ ಕೊಡಬಾರದೆಂದೂ ಆತನಿಗೆ ಸಲಹೆ ಇತ್ತನಂತೆ. ಸ್ವಾಮಿಯ ಸಂಪರ್ಕವು ಕುಮಾರನ್‌ನ ಬೆಳೆಯುತ್ತಿರುವ ಮನಸ್ಸಿನಲ್ಲಿ ಹಿತವಾದ ಪರಿಣಾಮವನ್ನು ಮಾಡಿತು.

ಆ ಕಾಲದಲ್ಲಿ ಕುಮಾರನ್ ಕೈಕೊಂಡ ಕೆಲಸ ಮಕ್ಕಳಿಗೆ ಸಂಸ್ಕೃತ ಕಲಿಸುವುದು. ಈ ವೃತ್ತಿಯಿಂದಾಗಿಯೇ ಆತನಿಗೆ 'ಆಶಾನ್' ಎಂಬ ಹೆಸರು ಬಂದು

ಬಿಟ್ಟಿತು. ಆಶಾನ್ ಎಂದರೆ ಅಧ್ಯಾಪಕನೆಂದರ್ಥ. ಆಶಾನ್ ಪದವು ಆಚಾರ್ಯ ಎಂಬ ಸಂಸ್ಕೃತ ಪದದ ತದ್ಭವರೂಪ. (ಆಚಾರ್ಯ>ಆಶಿರಿಯ>ಆಶಾನ್). ಹೀಗೆ ಕುಮಾರನನು ಕುಮಾರನ್ ಆಶಾನ್ ಎಂಬ ಹೆಸರನ್ನು ಹೊಂದಿದನು. ಈ ಹೆಸರು ಎಷ್ಟು ಪ್ರಚಾರಕ್ಕೆ ಬಂದಿದೆಯೆಂದರೆ ಮಲಯಾಳ ಸಾಹಿತ್ಯದ ಅಲ್ಪಸ್ವಲ್ಪ ಜ್ಞಾನವಿದ್ದ ವನು 'ಆಶಾನ್' ಎಂಬ ಹೆಸರನ್ನು ಕೇಳಿದೊಡನೆಯೇ ಈ ಕವಿಯನ್ನು ಗುರುತಿಸು ವನು. ಆದರೆ ಕುಮಾರನ್ ಎಂದು ಮಾತ್ರ ಹೇಳಿದರೆ ಗುರುತಿಸುವುದು ಯಾರಿಗೂ ಸಾಧ್ಯವಾಗದು.

ಸ್ವಾಮಿಯು ಕಾಯಿಕ್ಕರಕ್ಕೆ ಆಗಾಗ ಬಂದು ಈ ಉದಯೋನ್ಮುಖ ಕವಿಯನ್ನು ಸಂಧಿಸುತ್ತಿದ್ದನು. ಇವರಿಬ್ಬರೊಳಗೆ ಆ ಸಂದರ್ಶನಗಳಲ್ಲಿ ನಡೆದ ಮಾತುಕತೆಗಳ ವಿವರ ಸಮಗ್ರ ತಿಳಿದಿಲ್ಲವಾದರೂ ಆ ಸಂದರ್ಶನಗಳು ಆಶಾನನ ಮೇಲೆ ತುಂಬಾ ಪ್ರಭಾವ ವನ್ನು ಬೀರಿವೆ ಎಂಬುದರಲ್ಲಿ ಸಂಶಯವಿಲ್ಲ. ಹಿಂದಿಗಿಂತಲೂ ಹೆಚ್ಚಾಗಿ ಈಗ ಆಶಾನನು ಏಕಾಂತತೆಯನ್ನು ಮೆಚ್ಚುತ್ತಿದ್ದನು. ಆತನು ಧ್ಯಾನಕ್ಕಾಗಿ ಹತ್ತಿರದ ಗುಡ್ಡಕಾಡುಗಳಿಗೆ ಹೋಗುತ್ತಿದ್ದನು. ತಾತ್ವಿಕ ಚಿಂತನೆಯಿಂದ ಉದ್ವೇಜಿತವಾದ ಮನಸ್ಸಿಗೆ ಏಕಾಗ್ರಚಿಂತನೆಗೆ ಯುಕ್ತವಾದ ವಾತಾವರಣ ಬೇಕಾಗಿತ್ತು.

ಕುಮಾರನ್ ದೃಢಕಾಯನು. ಆತನ ವೈಬಣ್ಣ ಕಂದು. ಆತನ ನಿಲವನ್ನು ತುಸು ಗಿಡ್ಡವೆಂದೇ ಹೇಳಬಹುದು. ದಪ್ಪ ಕುತ್ತಿಗೆ, ಉರುಟಾದ ದೊಡ್ಡ ತಲೆ, ಸುರುಳಿ ತಲೆಗೂದಲುಗಳು, ಕಾಂತಿಯುತ ಕಣ್ಣುಗಳು—ಇವು ಯಾರನ್ನೂ ಆತನೆಡೆಗೆ ಆಕರ್ಷಿಸುತ್ತಿದ್ದುವು. ಆತನನ್ನು ಸರಿಯಾಗಿ ತಿಳಿಯದ ಜನರಿಗೆ ಹೆಚ್ಚಾದ ಆತ್ಮ ಸಂಬಿಕೆಯಿಂದ ಕೂಡಿದ ಆತನ ನಡೆಯು ಆತನು ದುರಹಂಕಾರಿ ಎಂಬ ಭಾವನೆಯನ್ನು ಹುಟ್ಟಿಸುತ್ತಿತ್ತು.

ಸ್ವಾಮಿಯು ಕುಮಾರನ್ ಆಶಾನನನ್ನು ಅರುವಿಪ್ಪುರದಲ್ಲಿದ್ದ ತನ್ನ ಆಶ್ರಮಕ್ಕೆ ಆಹ್ವಾನಿಸಿದನು. ಆಶಾನನು ಸಂತೋಷದಿಂದ ತನ್ನ ಇತರ ಕೆಲಸಗಳೆಲ್ಲವನ್ನೂ ಬದಿಗಿಟ್ಟು ಗುರುವನ್ನು ಹಿಂಬಾಲಿಸಿದನು. ಅನಂತರದ ಮೂರು ವರ್ಷಗಳನ್ನು ಆತನ ಶಿಷ್ಯನಾಗಿ ಕಳೆದನು. ಅರುವಿಪ್ಪುರವೆಂದರೆ ತೊರೆಯ ದಡ ಎಂದರ್ಥ. ಆ ಸ್ಥಳವು ನೆಯ್ಯಾರ್ ನದಿಯ ಬದಿಯಲ್ಲಿದ್ದ ನಿರ್ಜನ ವನಪ್ರದೇಶ. ಆ ಮನೋಹರವಾದ ವನ ಭೂಮಿಯು ಏಕಾಗ್ರ ಚಿಂತನೆಗೆ ಪ್ರಶಸ್ತವಾದ ಸ್ಥಳವಾಗಿತ್ತು. ಇದಕ್ಕಾಗಿಯೇ ಸ್ವಾಮಿಯು ಆ ಸ್ಥಳವನ್ನು ಆರಿಸಿದ್ದುದು. ಸ್ವಾಮಿಯು ಸ್ಥಾಪಿಸಿದ ಮೊತ್ತಮೊದಲಿನ ಸಂಸ್ಥೆಯೇ ಆ ಆಶ್ರಮ. ಈಗ ಆ ಜಾಗವು ಪವಿತ್ರಯಾತ್ರಾಸ್ಥಳದಂತೆ ಆಗಿ ಹೋಗಿದೆ. ಪ್ರತಿವರ್ಷವೂ ಜನರು ಗುಂಪುಗೂಡಿ ಆ ಸ್ಥಳವನ್ನು ಸಂದರ್ಶಿಸುತ್ತಾರೆ.

ವಿವೇಕೋದಯಂ ಎಂಬ ಮಾಸಿಕ ಸಂಚಿಕೆಯೊಂದರಲ್ಲಿ ಕುಮಾರನ್ ಆಶಾನನು ಆ ಸ್ಥಳದ ಸುಂದರ ಚಿತ್ರಣವನ್ನು ಕೊಟ್ಟಿರುವನು :

'ಈ ವಿಜನ ಪ್ರದೇಶದಲ್ಲಿ ಹರಿಯುವ ತೊರೆಯು ರಮಣೀಯವಾಗಿತ್ತು, ತೊರೆಯು ಹರಿಯುವಾಗ ಮುಂದೆ ಹಾದಿದ್ದ ಕಲ್ಲುಗಳಿಗೆ ನೀರು ಕೊಡೆಯುವ ಸಪ್ಪಳವು ಮಾರ್ದನಿಗುಡುತ್ತಿತ್ತು. ಆ ಮಳಲ ತೀರ, ಶಿಲಾ ಪ್ರದೇಶಗಳು, ಇಕ್ಕಡೆ

ಗಳಲ್ಲಿಯೂ ಇದ್ದ ಎತ್ತರವಾದ ಬೆಟ್ಟಗಳು, ಕಾಡಿನ ಹಚ್ಚಹಸುರು, ಇವೆಲ್ಲಾ ರಮ್ಯವಾಗಿದ್ದುವು. ಇವು ಏಕಾಂತತೆಯನ್ನು ಪ್ರೀತಿಸುತ್ತಿದ್ದ ಸ್ವಾಮಿಗೆ ಮೆಚ್ಚುಗೆಯಾದುವು. ಬಂಡೆಗಳ ಗುಹೆಗಳಲ್ಲಿ ಸ್ವಾಮಿಯು ಕೆಲವೊಮ್ಮೆ ಹಲದಿನಗಳನ್ನು ಅನ್ನಾಹಾರಗಳಿಲ್ಲದೆ ಕಳೆಯುತ್ತಿದ್ದನು. ಈ ವಿಷಯ ಯಾರಿಗೂ ತಿಳಿಯುತ್ತಿರಲಿಲ್ಲ. ಕಾಲಕ್ರಮೇಣ ಜನರಿಗೆ ಈ ವಿಚಿತ್ರ ಯೋಗಿಯ ಕುರಿತು ತಿಳಿದುಬಂತು.

ಸ್ವಾಮಿಯು ಈ ಪ್ರದೇಶವನ್ನು 1885 ರಲ್ಲಿ ಕಂಡುಹಿಡಿದಿದ್ದರೂ, ಇವಾದ ಮೂರು ವರ್ಷಗಳ ಮೇಲೆಯೇ ಈ ಸ್ಥಳವನ್ನು ಸಾರ್ವಜನಿಕ ಪೂಜಾಸ್ಥಳವಾಗಿ ಏರ್ಪಡಿಸಿದನು. ಕುಮಾರನ್ 1892 ರಲ್ಲಿ ಸ್ವಾಮಿಯನ್ನು ಸಂಧಿಸಿದನು. ಆ ಮೇಲಿನ ಮೂರು ವರ್ಷಗಳಲ್ಲಿ ಆತನು ಸ್ವಾಮಿಯ ಅವಿರತ ಸಂಗಾತಿಯಾಗಿದ್ದನು. ಅವರಿಬ್ಬರೂ ಜತೆಯಲ್ಲಿ ಊರೆಲ್ಲಾ ಸುತ್ತುತ್ತಾ, ಜನರಿಗೆ ಆಧ್ಯಾತ್ಮಿಕ ಮತ್ತು ಸಾಮಾಜಿಕ ವಿಷಯಗಳನ್ನು ಬೋಧಿಸುತ್ತಿದ್ದರು. ಆ ಕಾಲದಲ್ಲಿ ಕೆಲ ಮಂದಿರಗಳೂ ನಿರ್ಮಿತವಾದುವು. ಸ್ವಾಮಿಯ ಸಹವಾಸದಿಂದ ಶಿಷ್ಯನಲ್ಲಿಯೂ ಯೋಗಿಯ ಲಕ್ಷಣಗಳು ತೋರಿಬಂದುವು. ಆತನನ್ನು ಜನರು ಚಿನ್ನಸ್ವಾಮಿ (ಪುಟ್ಟಸ್ವಾಮಿ) ಎಂದು ಕರೆಯತೊಡಗಿದರು. ತನ್ನ ಕುಟುಂಬದವರಲ್ಲಿಯೂ ಅನಾಸಕ್ತನಾಗಿ ಆತನಿದ್ದ ಬಗೆಗೆ ಒಂದು ಕತೆ ಇದೆ.

ಒಂದು ಶಿವರಾತ್ರಿ ದಿನದಂದು ಆಶಾನನ ಅಣ್ಣನೂ ಚಿಕ್ಕಪ್ಪನೂ ಅರುವಿಪ್ಪುರದ ಆಶ್ರಮವನ್ನು ಸಂದರ್ಶಿಸಿದರು. ಸ್ವಾಮಿಯು ಹಜಾರದಲ್ಲಿ ಗಾಂಭೀರ್ಯದಿಂದ ಕುಳಿತಿದ್ದನು. ಕುಮಾರನ್ ಆತನ ಬಳಿಯಲ್ಲಿದ್ದನು. ಬಂದವರು ಹೊಸಬರೋ ಎಂಬಂತೆ ಕುಮಾರನ್‌ನ ವರ್ತನೆ ಇತ್ತು. ಆದರೆ ಸ್ವಾಮಿಯು ಅವರೊಡನೆ ಸಂಭಾಷಿಸಿದನು. ಕುಮಾರನ್‌ನ ತಾಯಿತಂದೆಯರು ಅವನನ್ನು ನೋಡಲು ಹಂಬಲಿಸಿರುವುದಾಗಿಯೂ ಸ್ವಾಮಿಯು ಸಮ್ಮತಿಸಿದರೆ ಅವನನ್ನು ತಮ್ಮೊಡನೆ ಕರೆದುಕೊಂಡು ಹೋಗುವುದಾಗಿಯೂ ಬಂದವರು ತಿಳಿಸಿದರು. ಕುಮಾರನ್‌ನು ಮನೆಗೆ ಹೋಗಿ ತಂದೆತಾಯಿಗಳನ್ನು ನೋಡಿ ಹಿಂತಿರುಗುವುದಕ್ಕೆ ತನ್ನದೇನೂ ಆಕ್ಷೇಪವಿಲ್ಲವೆಂದು ಸ್ವಾಮಿಯು ಹೇಳಿದನು. ಈ ಮಾತುಕತೆಯಾಗುವಾಗ ಕುಮಾರನ್ ಮೌನವಾಗಿಯೇ ಇದ್ದನು. ಕುಮಾರನ್ ಓಣಂ ಹಬ್ಬದಂದು ಅವರಲ್ಲಿಗೆ ಬರುವುದಾಗಿ ಸ್ವಾಮಿಯು ತಿಳಿಸಿದನು. ಆ ಹಬ್ಬದ ದಿನ ಆಶಾನನು ತನ್ನ ಒಬ್ಬ ಸ್ನೇಹಿತನೊಡನೆ ಮನೆಗೆ ಹೋದನು. ಅವರಿಬ್ಬರೂ ಮನೆಯ ಹೊರಭಾಗದಲ್ಲಿಯೇ ಕುಳಿತುಕೊಂಡರು. ಇದರ ಕಾರಣ ಕೇಳಿದಾಗ ಕುಮಾರನ್ ತನ್ನೊಡನೆ ಬಂದಿರುವ ಸ್ನೇಹಿತನು ಕಣಿಯುರ್ ಜಾತಿಗೆ ಸೇರಿದವನೆಂದೂ, ಅವನು ತನ್ನೊಡನೆ ಮನೆಯೊಳಗೆ ಬರಬಹುದಾದರೆ ಮಾತ್ರ ತಾನು ಒಳಬರುವೆನೆಂದೂ ತನ್ನ ತಂದೆತಾಯಿಗಳಿಗೆ ತಿಳಿಸಿದನು. ಕೂಡಲೇ ಒಳಬರಲು ಅನುಮತಿ ದೊರೆಯಿತು. ಮಾತ್ರವಲ್ಲ, ಅವನ ತಂದೆಯು ಅವರೊಡನೆ ಊಟಕ್ಕೂ ಕುಳಿತನು.

ಹಿಂದೆ ಏರ್ಪಾಡಾದಂತೆಯೇ ಕುಮಾರನ್ ಆಶಾನನು ಆಶ್ರಮಕ್ಕೆ ಹಿಂತಿರುಗಿದನು. ಅಲ್ಲಿ ಅವನು ಕಳೆದ ಮೂರು ವರ್ಷಗಳು ಅವನಿಗೆ ಉತ್ತಮ ಶಿಕ್ಷಣವನ್ನೂ

ತರಬೇತಿಯನ್ನೂ ನೀಡಿದುವು. ವೇದಾಂತದ ಅನೇಕ ಪುಸ್ತಕಗಳನ್ನು ಅವನು ಓದಿ ಅವುಗಳಲ್ಲಿ ಪರಿಣತನಾದನು. ಯೋಗಸಾಧನೆಯಲ್ಲಿಯೂ ಅವನಿಗೆ ಒಳ್ಳೆಯ ತರಬೇತಿ ದೊರೆಯಿತು. ಸ್ವಾಮಿಯು ಕುಮಾರನ್‌ನ ಮೇಲೆ ಬೀರಿದ ಪ್ರಭಾವ ಅದ್ಭುತ ವಾದುದು. ಕುಮಾರನ್‌ನ ಇಡಿ ಜೀವನವೇ ಸಮಾಜ ಕಲ್ಯಾಣಕ್ಕಾಗಿ ಮೀಸ ಲಾಯಿತು. ಶಿವಸ್ತೋತ್ರಮಾಲೆಯು ರಚಿತವಾದುದು ಅವನು ಅರುವಿಪ್ಪುರದಲ್ಲಿ ದ್ದಾಗಲೇ. ತನ್ನ ಗುರುವಿನಂತೆಯೇ ಆಶಾನನೂ ಶಿವಭಕ್ತನಾಗಿದ್ದನು.

## 3. ಮಾನಸಿಕ ದಿಗಂತದ ವಿಸ್ತಾರ

ನಾರಾಯಣ ಗುರುವು ಬರಿಯ ಆಧ್ಯಾತ್ಮಿಕ ಮುಂದಾಳು ಮಾತ್ರವಲ್ಲ. ತನ್ನ ವರ್ಗದ ಹಿತರಕ್ಷಣೆಯಲ್ಲಿ ಅಭಿವೃದ್ಧಿಯಲ್ಲಿ ಶೈಕ್ಷಣಿಕ ಸಾಮಾಜಿಕ ಮುಖಗಳ ಮಹತ್ವವನ್ನೂ ಆತನು ತಿಳಿದಿದ್ದನು. 'ಜ್ಞಾನವು ಶಕ್ತಿ' ಎಂಬುದನ್ನು ಬರಿಯ ಶಾತ್ವಿಕ ಅರ್ಥದಲ್ಲಿ ಮಾತ್ರವಲ್ಲದೆ ಸಾಮಾಜಿಕ ಅರ್ಥದಲ್ಲಿಯೂ ಹೊಂದುವುದೆಂದು ಇತರೆಲ್ಲರಿಗಿಂತಲೂ ಹೆಚ್ಚಾಗಿ ಸ್ವಾಮಿ ತಿಳಿದುಕೊಂಡಿದ್ದನು. ದೇವಾಲಯಗಳನ್ನು ಸ್ಥಾಪಿಸುವುದೇ ಸ್ವಾಮಿಯ ಅಂತಿಮಧ್ಯೇಯವಾಗಿರಲಿಲ್ಲ. 1917 ರಲ್ಲಿ ತಾನಿತ್ತ ಸಂದೇಶದಲ್ಲಿ ಆತನು ಹೀಗೆ ಹೇಳಿದ್ದನು :

'ದೇವಾಲಯ ನಿರ್ಮಾಣದಲ್ಲಿ ಹಣಖರ್ಚು ಮಾಡುವುದಕ್ಕೆ ಜನರು ಪಶ್ಚಾತ್ತಾಪ ಪಡುವ ಸಂಭವವಿದೆ. ಆದರೆ ಅಂತಹ ಪ್ರಯತ್ನಗಳನ್ನು ಪೂರ್ತಿಯಾಗಿ ನಿಲ್ಲಿಸಿಬಿಡುವುದು ಹಿತಕರವಲ್ಲ. ಆದುದರಿಂದ ಸಣ್ಣ ದೇವಾಲಯಗಳು ನಿರ್ಮಾಣ ವಾಗಲಿ. ಹೇಗಿದ್ದರೂ ದೊಡ್ಡ ದೇವಾಲಯಗಳು ವಿದ್ಯಾಸಂಸ್ಥೆಗಳೇ ಆಗಬೇಕು... ಜಾತಿಭೇದಗಳನ್ನು ಮರೆತು ಜನರು ಒಟ್ಟುಗೂಡಲು ದೇವಾಲಯಗಳು ಸಹಾಯ ವಾದಾವು ಎಂದು ಎಣಿಸಲಾಗಿತ್ತು. ಆದರೆ ಅನುಭವದಿಂದ ಆ ಎಣಿಕೆ ಸತ್ಯವಾದಂತೆ ಕಾಣಬರುವುದಿಲ್ಲ. ದೇವಾಲಯಗಳು ಜಾತಿಮೂಲಕವಾದ ಪ್ರತಿಬಂಧಕಗಳನ್ನು ಹೆಚ್ಚಿಸುತ್ತವೆ. ಈಗ ನಾವು ಜನರನ್ನು ವಿದ್ಯಾವಂತರನ್ನಾಗಿ ಮಾಡಲು ಪ್ರಯತ್ನಿಸ ಬೇಕು. ಅವರ ಜ್ಞಾನ ಹೆಚ್ಚಾಗಲಿ. ಅವರನ್ನು ಸುಧಾರಿಸಲು ಇದೊಂದೇ ದಾರಿ'.

ಸಾಮಾಜಿಕ ಶೈಕ್ಷಣಿಕ ಸುಧಾರಣೆಗಳಲ್ಲಿ ಕುಮಾರನ್ ಆಶಾನನನ್ನು ಹೆಚ್ಚಾಗಿ ಉಪಯೋಗಿಸಿಕೊಳ್ಳಬಹುದು ಎಂದು ಸ್ವಾಮಿಯು ತಿಳಿದಿದ್ದನು. ಆದರೆ ಆ ಕಾರ್ಯಕ್ಕೆ ಆಶಾನನು ಇನ್ನೂ ತಯಾರಾಗಿರಲಿಲ್ಲ. ಎಳವ ಸಮಾಜದಲ್ಲಿದ್ದ ಇಬ್ಬರು ಪ್ರಬಲವ್ಯಕ್ತಿಗಳೆಂದರೆ ಸ್ವಾಮಿ ಮತ್ತು ಚಿನ್ನಸ್ವಾಮಿ. ಹೀಗಿದ್ದರೂ ಈ ಹೆಸರುಗಳೊಂದಿಗೆ ಇನ್ನೊಂದು ಹೆಸರನ್ನೂ ಸೇರಿಸದೆ ಬಿಡಲಾಗುವುದಿಲ್ಲ. ಅದು

ತಿರುವನಂತಪುರದ ಡಾಕ್ಟರ್ ಪಿ. ಪಲ್ಪು ಎಂಬವನದು. ಅವನು ಎಳವ ಸಮಾಜಕ್ಕೆ ಸೇರಿದ್ದ ಕಾರಣ ಅವನಿಗೆ ಊರಲ್ಲಿ ಯೋಗ್ಯ ಉದ್ಯೋಗ ದೊರಕದೆ ಹೊರ ಊರಿನಲ್ಲಿ ಉದ್ಯೋಗ ಮಾಡಬೇಕಾಯಿತು. ಸ್ವಾಮಿಯು ಸಾಮಾಜಿಕ ಧಾರ್ಮಿಕ ವಿಷಯ ಗಳಿಗೆ ತನ್ನ ಜೀವನವನ್ನು ಅರ್ಪಿಸಿದ್ದರೆ ಡಾ. ಪಲ್ಪುವು ತನ್ನ ತನುಮನಧನಗಳನ್ನು ಎಳವ ವರ್ಗದ ಸಾಮಾಜಿಕ ಆರ್ಥಿಕ ಸುಧಾರಣೆಗಳಿಗೆ ವಿನಿಯೋಗಿಸಿದನು.

ಪಲ್ಪುವು ಜನಿಸಿದ್ದು 1861 ರಲ್ಲಿ. ಪ್ರಾಯದಲ್ಲಿ ಆತನು ಸ್ವಾಮಿಗಿಂತ ನಾಲ್ಕು ವರ್ಷ ಸಣ್ಣವನಾಗಿದ್ದನು. ಆ ಕಾಲದಲ್ಲಿ ಸರಕಾರಿ ಶಾಲೆಗಳಲ್ಲಿ ಎಳವರಿಗೆ ಪ್ರವೇಶ ಇರಲಿಲ್ಲವಾದರೂ ತಿರುವನಂತಪುರದ ಇಂಗ್ಲಿಷ್ ಹೈಸ್ಕೂಲಿನ ಮುಖ್ಯೋಪಾಧ್ಯಾಯ ನಾಗಿದ್ದ ಒಬ್ಬ ಐರೋಪ್ಯ ಅಧಿಕಾರಿಯ ಮೂಲಕ ಪಲ್ಪುವು ಹೇಗೋ ಸರಕಾರಿ ಶಾಲೆಯಲ್ಲಿ ಶಿಕ್ಷಣವನ್ನು ಪಡೆದನು. ಪ್ರಿ-ಡಿಗ್ರಿ ಪರೀಕ್ಷೆಗೆ ಸರಿಸಮವಾದ ಎಫ್.ಎ. ಪರೀಕ್ಷೆಯಲ್ಲಿ ಉತ್ತೀರ್ಣನಾದ ಮೇಲೆ ಸರಕಾರಿ ವೈದ್ಯಕೀಯ ಶಾಲೆಗೆ ಸೇರಲು ಆತನು ಪ್ರಯತ್ನಿಸಿದನು. ಆತನಿಗೆ ಸೇರಲು ಬೇಕಾದ ಶೈಕ್ಷಣಿಕ ಯೋಗ್ಯತೆಗಳೆಲ್ಲಾ ಇದ್ದರೂ, ಸರಕಾರಿ ವೈದ್ಯಕೀಯ ಶಾಲೆಯಲ್ಲಿ ಪ್ರವೇಶ ದೂರೆಯಲಿಲ್ಲ. ಈ ಅಪಜಯ ದಿಂದ ಕುಗ್ಗದೆ ಪಲ್ಪುವು ಮದ್ರಾಸಿಗೆ ಹೋಗಿ ವೈದ್ಯಕೀಯವನ್ನು ಕಲಿತು ಎಲ್.ಎಮ್.ಎಸ್. ಡಿಗ್ರಿಯನ್ನು ಪಡೆದನು. ಆಮೇಲೆ ತಿರುವನಂತಪುರಕ್ಕೆ ಹಿಂದಿರುಗಿ ಬಂದು ಉದ್ಯೋಗಕ್ಕೆ ಸೇರಲು ಪ್ರಯತ್ನಿಸಿದನು. ಆದರೆ ಇದು ಫಲಿಸಲಿಲ್ಲ. ಇಲ್ಲಿ ಉದ್ಯೋಗವು ದೊರಕದಿದ್ದರೂ ಮೈಸೂರು ರಾಜ್ಯದಲ್ಲಿ ಪಲ್ಪುವಿಗೆ ಉದ್ಯೋಗವು ದೊರಕಿತು. ಅಲ್ಲಿ ಲಿಂಪ್ ಸಂಸ್ಥೆಯ ಆರೋಗ್ಯಾಧಿಕಾರಿಯೂ ನಿರ್ದೇಶಕನೂ ಆಗಿ ಆತನು ಉದ್ಯೋಗವನ್ನು ಮಾಡಿದನು. ಅಂದಿನ ದಿನದಲ್ಲಿ ತಿಂಗಳಿಗೆ ಒಂದು ಸಾವಿರ ರೂಪಾಯಿಯಷ್ಟು ಸಂಬಳವನ್ನು ಆತನು ಪಡೆಯುತ್ತಿದ್ದನೆಂಬುದು ಆತನು ಗಳಿಸಿದ್ದ ಸ್ಥಾನಮಾನವನ್ನು ಸೂಚಿಸುವುದು. ಹೀಗಿದ್ದರೂ ಜಾತಿಭೇದಗಳು ಹೆಚ್ಚಾಗಿದ್ದ ಆತನ ಊರಿನಲ್ಲಿ ಆ ಸ್ಥಾನಮಾನಗಳು ದೊರೆತಿರಲಿಲ್ಲ.

ಡಾಕ್ಟರ್ ಪಲ್ಪು ತನ್ನ ಸಮಾಜಕ್ಕೆ ಸಲ್ಲಿಸಿದ ಸೇವೆಯು ಜನರಿಗೆ ಅಷ್ಟಾಗಿ ತಿಳಿದಿಲ್ಲ. ಯೋಜನೆ ಸಂಘಟನೆಗಳನ್ನು ಮಾಡುವಲ್ಲಿ ಆತನು ಪರಿಣತನಾಗಿದ್ದನು. 'ಎಳವ ಸ್ಮಾರಕ'ವನ್ನು ಆರಂಭಿಸಿದವನು ಆತನೇ. ಆತನೇ ಎಸ್.ಎನ್.ಡಿ.ಪಿ. ಯೋಗ ಸ್ಥಾಪನೆಗೂ ಸಹಾಯಕನಾದವನು. ಈ ಸಮಾಜ ಸುಧಾರಣಾ ಕಾರ್ಯವು ಆತನಿಗೆ ಅತ್ಯಂತ ಮೆಚ್ಚುಗೆಯಾಯಿತು. ಆತನು ಈ ಕಾರ್ಯಕ್ಕಾಗಿ ತನ್ನ ತನು ಮನಧನಗಳನ್ನೂ ಅರ್ಪಿಸಿದನು. ಪಲ್ಪುವೂ ನಾರಾಯಣ ಗುರುವೂ ಒಟ್ಟು ಸೇರಿದುದು ಉತ್ಸಾಹ ವಿಚಾರಗಳ, ಹುರುಪು ಅನುಭವಗಳ ಸಂಯೋಗದಂತೆ ಇಡೀ ಸಮಾಜಕ್ಕೆ ಹಿತಕರವಾಯಿತು. ಒಬ್ಬರಿಗೆ ಒಬ್ಬರು ಎಲ್ಲಾ ರೀತಿಗಳಲ್ಲಿಯೂ ಪೂರಕವಾಗಿದ್ದರು. ಇವರಿಬ್ಬರ ವಿಚಾರಗಳಲ್ಲಿಯೂ ಕುಮಾರನ್ ಆಶಾನನು ಪಾಲುಗೊಳ್ಳುತ್ತಿದ್ದನು. ಆತನಿಗೆ ಅವರೊಡನಿದ್ದ ನಿಕಟಸಂಬಂಧವೇ ಇದಕ್ಕೆ ನೆರವಾಯಿತು. ಆತನು ಅವರ ವಿಚಾರಗಳಲ್ಲಿ ಭಾಗವಹಿಸುತ್ತಿದ್ದ ರೀತಿ ಪ್ರಸ್ತುತ ವಿಚಾರಕ್ಕೆ ಸಂಬಂಧಿಸಿದುದು.

ಕೆಲಕಾಲ ಉತ್ತರ ತಿರುವಾಂಕೂರಿನಲ್ಲಿ ಪ್ರಯಾಣ ಮಾಡಿದ ಮೇಲೆ ಸ್ವಾಮಿಯು

ತನ್ನ ಶಿಷ್ಯರೊಡನೆ ಬೆಂಗಳೂರನ್ನು 1895 ರಲ್ಲಿ ಸಂದರ್ಶಿಸಿದನು. ಸ್ವಾಮಿಯನ್ನೂ ಆತನ ಶಿಷ್ಯರನ್ನೂ ಸ್ವಾಗತಿಸುವ ಸತ್ಕರಿಸುವ ಸಂದರ್ಭ ದೊರೆತುದು ಡಾಕ್ಟರ್ ಪಲ್ಪುವಿಗೆ ಅತ್ಯಂತ ಸಂತೋಷವನ್ನುಂಟುಮಾಡಿತ್ತು. ತಮ್ಮ ಸಮಾಜದ ಅಭ್ಯುದಯಕ್ಕಾಗಿ ಅನೇಕ ಯೋಜನೆಗಳನ್ನು ಅವರು ಚರ್ಚಿಸಿದರು. ಕೊನೆಗೆ ಸಮಾಜದ ಭವಿಷ್ಯವು ಅದರ ಶಿಕ್ಷಿತ ಯುವಕರನ್ನೇ ಹೆಚ್ಚಾಗಿ ಅವಲಂಬಿಸಿರುವುದೆಂಬ ನಿರ್ಣಯಕ್ಕೆ ಅವರು ಬಂದರು. ಒಬ್ಬ ತರುಣನ ಶಿಕ್ಷಣದ ಪೂರ್ತಿ ವೆಚ್ಚವನ್ನು ತಾನು ಹೊರುವುದಾಗಿ ಡಾಕ್ಟರ್ ಪಲ್ಪು ಹೇಳಿದನು. ಇದನ್ನು ಕೇಳಿ ಅಂತಹ ಶಿಕ್ಷಣ ಪಡೆಯುವುದಕ್ಕೆ ಕುಮಾರನನ ಹೆಸರನ್ನು ಸ್ವಾಮಿಯು ಸೂಚಿಸಿದನು. ಇದು ಪಲ್ಪುವಿಗೆ ಪೂರ್ತಿ ಒಪ್ಪಿಗೆಯಾಯಿತು. ಸ್ವಾಮಿಯ ಅಭಿಪ್ರಾಯವನ್ನು ಆತನು ಆಜ್ಞೆಯೆಂದೇ ಸ್ವೀಕರಿಸುತ್ತಿದ್ದನು.

ಕುಮಾರನ್ ಆಶಾನನನ್ನು ಬಿಟ್ಟು ಸ್ವಾಮಿಯು ಪ್ರಯಾಣವನ್ನು ಮುಂದರಿಸಿ ಚಿದಂಬರ, ಮದುರೆ ಮತ್ತು ಇನ್ನಿತರ ತಮಿಳುನಾಡಿನ ಮುಖ್ಯ ಸ್ಥಳಗಳನ್ನು ಸಂದರ್ಶಿಸಿ ತಿನ್ನವೆಲ್ಲಿಯ ದಾರಿಯಾಗಿ ತಿರುವಾಂಕೂರಿಗೆ ಹಿಂದಿರುಗಿದನು. ತನ್ನ ಗುರುವಿನ ವಿಯೋಗವನ್ನು ಸಹಿಸುವುದು ಕುಮಾರನ್ ಆಶಾನನಿಗೆ ಕಷ್ಟವಾಯಿತು. ಗಟ್ಟಿಮನಸ್ಸಿನವನಾಗಿದ್ದರೂ, ಹೆಚ್ಚಿನ ಶಿಕ್ಷಣದಲ್ಲಿ ಬಹುವಾದ ಆಸಕ್ತಿ ಆತನಿಗಿದ್ದರೂ ಗುರುವಿನ ಮೇಲಣ ಪ್ರೇಮಾಧಿಕ್ಯದಿಂದ ಆತನು ಕಣ್ಣೀರು ಸುರಿಸಿಬಿಟ್ಟನು.

ಡಾಕ್ಟರ್ ಪಲ್ಪುವು ಬೆಂಗಳೂರಲ್ಲಿ ತನ್ನ ಕುಟುಂಬದೊಂದಿಗೆ ಜೀವಿಸುತ್ತಿದ್ದನು. ಆ ಕುಟುಂಬದ ಸದಸ್ಯರಲ್ಲಿ ಕುಮಾರನನೂ ಒಬ್ಬನಾಗಿ ಸೇರಿಬಿಟ್ಟನು. ಡಾ. ಪಲ್ಪುವಿನ ಮತ್ತು ಅವನ ಕುಟುಂಬದ ಸಹವಾಸ ದೊರೆತುದು ಕುಮಾರನನ ಜೀವನದಲ್ಲಿ ಇನ್ನೊಂದು ಮಹತ್ವದ ಘಟ್ಟ. ಆಗ ಆತನ ವಯಸ್ಸು ಇಪ್ಪತ್ತೆರಡು. ಇದಾದ ಸ್ವಲ್ಪ ಕಾಲದಲ್ಲಿಯೇ ಕುಮಾರನನು ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜನ್ನು ಸೇರಿದನು.

ಬೆಂಗಳೂರಿನ ಸಂಸ್ಕೃತ ಕಾಲೇಜು ಮೇಲುಜಾತಿಯ ಹಿಂದುಗಳಿಗೆ ಮಾತ್ರ ಮೀಸಲಾಗಿತ್ತು. ಮೈಸೂರು ರಾಜ್ಯದ ಲಿಂಗಾಯತರಿಗೂ ಅವರು ಅಬ್ರಾಹ್ಮಣರಾದುದರಿಂದ ಅಲ್ಲಿ ಪ್ರವೇಶ ಇರಲಿಲ್ಲ. ಮೈಸೂರು ರಾಜ್ಯದ ಆಗಿನ ದಿವಾನರಾದ ಸರ್. ಕೆ. ಶೇಷಾದ್ರಿ ಅಯ್ಯರರ ಪರಿಚಯ ಡಾ. ಪಲ್ಪುವಿಗಿದ್ದುದರಿಂದ ಆ ಮೂಲಕ ಕಾಲೇಜು ಪ್ರವೇಶದ ನಿಯಮಗಳನ್ನು ಕುಮಾರನ್ ಆಶಾನನ ಕುರಿತಾಗಿ ಮಾತ್ರ ಸಡಿಲಗೊಳಿಸಿ ಆತನಿಗೆ ಪ್ರವೇಶ ಕೊಡಲಾಯಿತು. ಆ ಕಾಲೇಜಿನಲ್ಲಿ ಏಕಮಾತ್ರ ಅಬ್ರಾಹ್ಮಣ ವಿದ್ಯಾರ್ಥಿಯೆಂದರೆ ಕುಮಾರನ್ ಆಶಾನನೊಬ್ಬನೇ.

ಆಶಾನನು ತನ್ನ ಆತ್ಮೀಯ ಗೆಳೆಯನೊಬ್ಬನಿಗೆ ಬರೆದ ಪತ್ರದ ಮುಂದೆ ಕಾಣಿಸಿದ ಕೆಲಭಾಗಗಳು ಅಂದಿನ ದಿನಗಳಲ್ಲಿದ್ದ ಪರಿಸ್ಥಿತಿಯ ಅರಿವನ್ನು ಸ್ಥೂಲವಾಗಿ ಮಾಡಿಕೊಡುವುವು.

ಬೆಂಗಳೂರು

ಪ್ರಿಯ ಸ್ನೇಹಿತನೇ,

1, ಸೆಪ್ಟಂಬರ 1896

ನೀನು ಕಳುಹಿಸಿದ ಪತ್ರವೂ ಪುಸ್ತಕವೂ ದೊರೆತಿವೆ. ಇದುವರೆಗೆ ನಾನು ಪತ್ರ ಬರೆಯಲಾಗದಿದ್ದುದಕ್ಕೆ ನನಗೆ ಕ್ಷಮಾಯಾಚನೆಯಲ್ಲದೆ ಬೇರೆ ದಾರಿಯಿಲ್ಲ. ನಿನಗೆ ಮಾತ್ರವಲ್ಲ. ಕಾಕ್ಕಕುಳಿಯ ನನ್ನ ಇನ್ನೊಬ್ಬ ಸ್ನೇಹಿತನಿಗೂ ನಾನು ಪತ್ರ ಬರೆದಿಲ್ಲ. ಈ ದೃಷ್ಟಿಯಿಂದ ನಾನು ಅಪರಾಧಿ . . .

ನಾನು ಇಲ್ಲಿನ ಸಂಸ್ಕೃತ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿ ಸೇರಿದ್ದೇನೆ. ಈ ಸಂಸ್ಥೆಯಲ್ಲಿರುವ ವಿದ್ಯಾರ್ಥಿಗಳಲ್ಲಿ ಅಬ್ರಾಹ್ಮಣವರ್ಗಕ್ಕೆ ಸೇರಿದವನು ನಾನೊಬ್ಬನೇ. ನಾನು ಇಲ್ಲಿ ಕಲಿಯುತ್ತಿರುವುದಕ್ಕೆ ಅನೇಕರ ವಿರೋಧವಿತ್ತು. ಆದರೆ ಕಾಲವು ವಿರೋಧವನ್ನು ಕೊಂಚ ಶಾಂತಗೊಳಿಸಿದೆ. ಈಗ ನನಗೆ ಒಂದು ರೂಪಾಯಿಯ ವಿದ್ಯಾರ್ಥಿವೇತನ ದೊರೆಯುತ್ತಿದೆ. ಇನ್ನೂ ಸ್ವಲ್ಪ ಹೆಚ್ಚು ದೊರೆಯುವ ಸಂಭವ ಇದೆ. ಪ್ರಸ್ತುತ ನಾನು ನೀಲಕಂಠೀಯವನ್ನು ಕಲಿಯುತ್ತಿದ್ದೇನೆ.

ಇಲ್ಲಿ ಜೀವನ ಸುಗಮವಾಗಿ ಕಳೆಯುತ್ತಿವೆ. ನನ್ನ ಯೋಗಕ್ಷೇಮದ ಕುರಿತು ನನ್ನ ಇತರ ಗೆಳೆಯರಿಗೆ ನೀನು ದಯವಿಟ್ಟು ತಿಳಿಸುವಿಯಾಗಿ ನಂಬುವೆ. ಪ್ರತಿಯೊಬ್ಬನಿಗೂ ಬೇರೆ ಬೇರೆಯಾಗಿ ಪತ್ರ ಬರೆಯಬೇಕೆಂಬ ಆಶೆ ನನಗಿದೆ. ಆದರೆ ಸೀಮಿತವಾದ ಕಾಲ, ಪ್ರಕೃತಿಗತವಾದ ಆಲಸ್ಯ ಇವು ಅಡ್ಡಿ ಬರುತ್ತಿವೆ.

ಓ! ಪದ್ಯರಚನೆಗೆ ಹೆಚ್ಚು ಸಮಯ ನನಗೀಗ ದೊರೆಯುವುದಿಲ್ಲ. ಏನೋ ಕೆಲವು ಸಂಸ್ಕೃತ, ಮಲಯಾಳ ಪದ್ಯಗಳನ್ನು ಬರೆದಿರುವೆನಷ್ಟೆ . . .

ನಿಮ್ಮೆಲ್ಲರ ಯೋಗಕ್ಷೇಮಗಳಿಗೆ ಭಗವಂತನನ್ನು ಪ್ರಾರ್ಥಿಸುವೆ.

ನಿನ್ನ ಪ್ರೀತಿಯ
ಕುಮಾರ್.

ಆಶಾನನು ಆ ಕಾಲೇಜಿನಲ್ಲಿ ಮೂರುವರ್ಷ ಇದ್ದನು. ಅಲ್ಲಿ ತರ್ಕಶಾಸ್ತ್ರವನ್ನು ಐಚ್ಛಿಕವಾಗಿ ತೆಗೆದುಕೊಂಡು ನ್ಯಾಯವಿದ್ವಾನ್ ಪರೀಕ್ಷೆಗಾಗಿ ಆತನು ಕಲಿಯುತ್ತಿದ್ದನು. ತ್ರೈಮಾಸಿಕ ಮತ್ತು ವಾರ್ಷಿಕ ಪರೀಕ್ಷೆಗಳಲ್ಲಿ ಆತನು ಬಹು ಚಲೋದಾಗಿ ಬರೆದಿದ್ದನು. ಅಂತಿಮಪರೀಕ್ಷೆಯಲ್ಲಿ ಮೊದಲ ಸ್ಥಾನವನ್ನು ಪಡೆದು ಉತ್ತೀರ್ಣನಾಗುವೆನೆಂಬ ಹೆಚ್ಚಿನ ಭರವಸೆ ಆತನಿಗಿತ್ತು. ಇದು ಇತರ ವಿದ್ಯಾರ್ಥಿಗಳಲ್ಲಿ ಮತ್ಸರದ ಉರಿಯನ್ನೆಬ್ಬಿಸಿತು. ಅವನು ಆ ಪರೀಕ್ಷೆ ಬರೆಯಲು ಸಾಧ್ಯವಿಲ್ಲದಂತೆ ಮಾಡಲು ಅವರು ಯೋಜನೆಗಳನ್ನು ಹೂಡಿದರು. ಅಬ್ರಾಹ್ಮಣನಿಗೆ ಶಾಲೆಯಲ್ಲಿ ಪ್ರವೇಶವನ್ನು ಕೊಟ್ಟು ವೇದಶಾಸ್ತ್ರಗಳನ್ನು ಕಲಿಯಲು ಅವನಿಗೆ ಎಡೆಕೊಟ್ಟುದರ ವಿರುದ್ಧ ಚಳವಳ ಹೂಡಲು ಅವರು ಪ್ರಯತ್ನಿಸಿದರು. ಕೊನೆಗೆ ದಿವಾನರಿಗೇ ಆಶಾನನನ್ನು ಕಾಲೇಜಿನಿಂದ ಹೊರಕಳುಹಿಸಬೇಕಾಗಿ ಬಂತು. ಹೀಗೆ ಅಂತಿಮ ಪರೀಕ್ಷೆ ಬರೆಯಲು ಆತನಿಗೆ ಅವಕಾಶ ದೊರೆಯಲಿಲ್ಲ. ಈ ಚಳವಳದ ಕಾಲಕ್ಕೇ ಬೆಂಗಳೂರು ಪಟ್ಟಣದಲ್ಲಿ ಪ್ಲೇಗ್ ರೋಗವೂ ಕಾಣಿಸಿಕೊಂಡಿತು. ಒಡನೆಯೇ ಕಾಲೇಜನ್ನು ಮುಚ್ಚಲಾಯಿತು. ಇದೇ ಸಮಯದಲ್ಲಿ ಆಶಾನನ ಪೋಷಕನಾದ

ಡಾ. ಪಲ್ಪುವೂ ಯೂರೋಪಿನಲ್ಲಿ ಹೆಚ್ಚಿನ ಶಿಕ್ಷಣವನ್ನು ಪಡೆಯಲಿಕ್ಕಾಗಿ ಬೆಂಗಳೂರನ್ನು ಬಿಡಬೇಕಾಗಿ ಬಂತು. ಇದು ಆಶಾನನಿಗೆ ಹೆಚ್ಚಿನ ನಿರಾಶೆಯನ್ನುಂಟು ಮಾಡಿತು. ಆದರೆ ಅವನನ್ನು ಸಂಪೂರ್ಣ ಬಿಟ್ಟುಹಾಕಿರಲಿಲ್ಲ. ಡಾ. ಪಲ್ಪುವು ಮದ್ರಾಸಿನಲ್ಲಿದ್ದ ತನ್ನ ಸಹಪಾಠಿಯೂ ಸ್ನೇಹಿತನೂ ಆದ ಡಾ. ನಂಜುಂಡರಾವನ ವಶಕ್ಕೆ ಆಶಾನನನ್ನು ಒಪ್ಪಿಸಿದನು. ಡಾ. ರಾವು ಬಹಳ ಒಳ್ಳೆಯ ರೀತಿಯಿಂದ ಆಶಾನನನ್ನು ನೋಡಿಕೊಂಡನು. ಆಶಾನನ ವಿನಯ ಮೇಧಾವಿತನಗಳನ್ನು ಆತನು ಮೆಚ್ಚಿಕೊಂಡು ಆಶಾನನು ತನ್ನೊಡನೆ ಇರಲು ಸಮ್ಮತಿಸಿದನು.

ಆಶಾನನು ಒಬ್ಬ ಸಂಸ್ಕೃತ ಪಂಡಿತನ ಕೆಳಗೆ ಕಲಿಯುತ್ತ ಆರು ತಿಂಗಳು ಮದ್ರಾಸಿನಲ್ಲಿ ಕಳೆದನು. ಡಾ. ಪಲ್ಪುವಿಗೆ ಈ ವ್ಯವಸ್ಥೆಯು ತೃಪ್ತಿಕರವಾಗಿ ತೋರಲಿಲ್ಲ. ಆತನ ಸಲಹೆಯಂತೆ ಹೆಚ್ಚಿನ ಶಿಕ್ಷಣಕ್ಕಾಗಿ ಆಶಾನನನ್ನು ಕಲ್ಕತ್ತೆಗೆ ಕಳುಹಿಸಲು ಡಾ. ರಾವು ಏರ್ಪಾಡು ಮಾಡಿದನು. ಡಾ. ಪಲ್ಪುವಿನ ಲೆಕ್ಕದಿಂದ ಡಾ. ರಾವು ಪ್ರತಿ ತಿಂಗಳು ಹತ್ತು ರೂಪಾಯಿಗಳನ್ನು ಆಶಾನನಿಗೆ ಕಳುಹಿಸುವುದಾಗಿ ತೀರ್ಮಾನವಾಗಿತ್ತು. ಡಾ. ರಾವು ಆಶಾನನನ್ನು ತುಂಬಾ ಮೆಚ್ಚಿಕೊಂಡುದರಿಂದ ಈ ಹತ್ತುರೂಪಾಯಿಗಳ ಜೊತೆಗೆ ತಾನೂ ತನ್ನ ಲೆಕ್ಕದಿಂದ ಮೂರು ರೂಪಾಯಿಗಳನ್ನು ಸೇರಿಸಿ ಆಶಾನನಿಗೆ ಕಳುಹಿಸುತ್ತಿದ್ದನು. ಇದರಿಂದ ಆಶಾನನಿಗೆ ತನ್ನ ಖರ್ಚು ನೋಡಿಕೊಳ್ಳುವುದಕ್ಕೆ ಹೆಚ್ಚು ಅನುಕೂಲವಾಯಿತು.

ಆಶಾನನು ಕಲ್ಕತ್ತೆಯ ಸಂಸ್ಕೃತಕಾಲೇಜನ್ನು ಸೇರಿ ತನ್ನ ಅಭ್ಯಾಸಕ್ಕಾಗಿ ನ್ಯಾಯಶಾಸ್ತ್ರವನ್ನೇ ತೆಗೆದುಕೊಂಡನು. ಹೀಗಿದ್ದರೂ ವ್ಯಾಕರಣ ಮತ್ತು ಪದ್ಯಸಾಹಿತ್ಯದ ಪಾಠಗಳನ್ನೂ ಕೇಳಿಕೊಳ್ಳುತ್ತಿದ್ದನು. ತರ್ಕತೀರ್ಥ ಎಂಬ ಸನದಿನ ಪರೀಕ್ಷೆಗಾಗಿ ಆತನು ಎರಡು ವರ್ಷ ಕಲಿಯಬೇಕಾಗಿತ್ತು. ಆಶಾನನು ದಿವಸಕ್ಕೆ ಇಪ್ಪತ್ತು ಘಂಟೆಗಳಷ್ಟು ವ್ಯಾಸಂಗದಲ್ಲಿ ಕಳೆಯುತ್ತಿದ್ದನು. ಆತನಿಗೆ ಪುಸ್ತಕ ಕೀಟ ಎಂಬುದಾಗಿ ಇತರ ವಿದ್ಯಾರ್ಥಿಗಳು ಹೆಸರಿಟ್ಟಿದ್ದರು. ಆತನ ಗುರುವಾದ ಕಾಮಾಖ್ಯನಾಥ ತರ್ಕವಾಗೀಶರಿಗೆ ಆತನ ಬಗ್ಗೆ ತುಂಬಾ ಮೆಚ್ಚುಗೆ. ವಿಶೇಷಸಮಾರಂಭಗಳಿಗೆ ಸಂಸ್ಕೃತ ಕವಿತೆಗಳನ್ನು ರಚಿಸಲು ಅವರು ಆಶಾನನನ್ನು ಕೇಳಿಕೊಳ್ಳುತ್ತಿದ್ದರು. ಕಲ್ಕತ್ತೆಯಲ್ಲಿರುವಾಗ ಆಶಾನನು ವ್ಯಾಸಂಗದಲ್ಲಿ ತೀರಾ ಮಗ್ನನಾಗಿದ್ದುದರಿಂದ ಆತನಿಗೆ ಯಾವ ಸ್ವತಂತ್ರಕವಿತೆಗಳನ್ನೂ ರಚಿಸಲು ಸಾಧ್ಯವಾಗಲಿಲ್ಲ. ಹಾಗಿದ್ದರೂ 'ಒರು ವಂಗದೇಶಿಕನ್' (ಒಬ್ಬ ಬಂಗಾಳಿ) ಎಂಬ ಗುಪ್ತನಾಮದಿಂದ ಆತನು ಮಲಯಾಳ ಸಂಚಿಕೆಗಳಿಗೆ ಲೇಖನಗಳನ್ನು ಕಳುಹಿಸುತ್ತಿದ್ದನು.

ಕಲ್ಕತ್ತೆಯಲ್ಲಿಯೂ ಆಶಾನನಿಗೆ ಅಂತಿಮ ಪರೀಕ್ಷೆಗೆ ನಿಲ್ಲಲು ಸಾಧ್ಯವಾಗಲಿಲ್ಲ. ಅಲ್ಲಿ 1900 ರಲ್ಲಿ ಹಬ್ಬಿದ ಪ್ಲೇಗ್ ರೋಗವೇ ಇದಕ್ಕೆ ಕಾರಣ. ಪರೀಕ್ಷೆಗಳಿಗೆ ಮುಂಚೆಯೇ ಕಾಲೇಜುಗಳು ಮುಚ್ಚಲ್ಪಟ್ಟುವು. ಆಶಾನನು ಪಟ್ಟಣವನ್ನು ಬಿಟ್ಟು ತೊಲಗಬೇಕಾಯಿತು. ಬಹುಶ ಯಾವ ಸನದನ್ನೂ ಪಡೆಯುವ ಅದೃಷ್ಟ ಆಶಾನನಿಗಿರಲಿಲ್ಲವೇನೋ! ಈ ಸಂದರ್ಭದಲ್ಲಿ ಡಾ. ಪಲ್ಪುವು ಬೆಂಗಳೂರಿಗೆ ಹಿಂದಿರುಗಿದ್ದನು. ಆದುದರಿಂದ ಚಿನ್ನಸ್ವಾಮಿಯು (ಡಾ. ಪಲ್ಪುವು ಪ್ರೀತಿಯಿಂದ ಆಶಾನನನ್ನು ಹಾಗೆ

ಕರೆಯುತ್ತಿದ್ದನು) ಕಲ್ಕತ್ತೆಯಿಂದ ಬೆಂಗಳೂರಿಗೆ ಹೋದನು. ಆ ಮೇಲೆ ಆತನು ತಿರುವನಂತಪುರಕ್ಕೆ ಹಿಂದಿರುಗಿದುದೂ ಡಾ. ಪಲ್ಪುವಿನೊಡನೆಯೇ.

ಆಶಾನನು ಯಾವ ಬಿರುದು ಸನದುಗಳನ್ನೂ ಪಡೆಯದಿದ್ದುದರಿಂದ ಕೇರಳದಿಂದ ಹೊರಗೆ ಆತನು ಕಳೆದ ಐದು ವರ್ಷಗಳಕಾಲ ವ್ಯರ್ಥವಾಯಿತು ಎಂದು ತೋರಿಕಗೆ ಅನಿಸಬಹುದು. ಆದರೆ ಸನದನ್ನು ಪಡೆಯುವುದೇ ಶಿಕ್ಷಣದ ಏಕಮಾತ್ರ ಉದ್ದೇಶವಾದರೆ ಮೇಲಿನ ಅಭಿಪ್ರಾಯವನ್ನು ಅಂಗೀಕರಿಸಬಹುದಷ್ಟೆ. ಶೈಕ್ಷಣಿಕ ವಿಷಯಗಳ ಜ್ಞಾನಾರ್ಜನೆಯು ಮುಖ್ಯ ಉದ್ದೇಶವೆಂದು ನಾವು ಒಪ್ಪುವುದಾದರೆ ಆಶಾನನ ಜೀವನದ ಆ ಐದು ವರ್ಷಗಳಕಾಲ ನಿಜವಾಗಿಯೂ ಫಲಪ್ರದವಾಗಿತ್ತು. ವಿವಿಧ ಅನುಭವಗಳ ಸಂಗ್ರಹ, ಉತ್ತಮ ಜೀವನವನ್ನು ನಡೆಸಲು ಅನುಕೂಲಿಸುವಂತೆ ಜೀವನದ ಬಹುಮುಖಗಳ ತಿಳಿವಳಿಕೆ—ಇವುಗಳು ಮುಖ್ಯೋದ್ದೇಶವೆಂದು ನಾವು ಎಣಿಸುವುದಾಗಿದ್ದರೆ ಆ ಕಾಲವು ಆಶಾನನ ಜೀವನದಲ್ಲಿ ವಿಶೇಷವಾಗಿ ಸಫಲವಾದ ಕಾಲವೆನ್ನಬೇಕು. ಬೆಂಗಳೂರು, ಮದ್ರಾಸು, ಕಲ್ಕತ್ತೆಗಳಲ್ಲಿ ಕಳೆದಕಾಲ ಕನ್ನಡ, ತಮಿಳು, ಬಂಗಾಳಿ, ಆಂಗ್ಲ ಸಾಹಿತ್ಯಗಳ ಸಂಪರ್ಕ ತಿಳುವಳಿಕೆಗಳನ್ನು ಪಡೆಯಲು ಅನುಕೂಲವಾಯಿತು. ಇದು ಆಶಾನನಿಗೆ ದೊರೆತ ಒಂದು ದೊಡ್ಡ ಅನುಗ್ರಹ. ಆತನ ಜನ್ಮಭೂಮಿಯಾದ ಕೇರಳದಲ್ಲಿ ಆತನು ಅರಗಿಸಿಕೊಂಡಿದ್ದ ಸಂಸ್ಕೃತಿಗಿಂತ ಭಿನ್ನ ಸಂಸ್ಕೃತಿಗಳ ಸಂಪರ್ಕ ಆತನಿಗೆ ದೊರೆತಾಗ ನಿಜವಾಗಿಯೂ ಆತನ ಮಾನಸಿಕ ದಿಗಂತ ವಿಸ್ತಾರವಾಯಿತು.

ಕೇರಳವನ್ನು 1895 ರಲ್ಲಿ ಆತನು ಬಿಟ್ಟುಹೋಗುವುದಕ್ಕೆ ಮುಂಚಿತವಾಗಿಯೇ ತಮಿಳಿನಲ್ಲಿ ಒಳ್ಳೆಯ ವ್ಯವಹಾರ ಜ್ಞಾನವೂ ಸಂಸ್ಕೃತದಲ್ಲಿ ಉನ್ನತಮಟ್ಟದ ಪರಿಣತಿಯೂ ಆತನಿಗಿದ್ದುವು. ಸಂಸ್ಕೃತವಂತೂ ಬೆಂಗಳೂರು ಕಲ್ಕತ್ತೆಗಳಲ್ಲಿ ಆತನು ವಿಶೇಷವ್ಯಾಸಂಗಕ್ಕಾಗಿ ಆಯ್ದುಕೊಂಡ ವಿಷಯ. ಬೆಂಗಳೂರಿನಲ್ಲಿ ಕಳೆದ ಮೂರು ವರ್ಷಗಳ ಕಾಲದಲ್ಲಿ ಕನ್ನಡ ಭಾಷೆ ಸಾಹಿತ್ಯಗಳ ಹೆಚ್ಚಿನ ಜ್ಞಾನ ಆತನಿಗೆ ದೊರೆತಿರಬೇಕು. ಆದರೆ ಆಂಗ್ಲ ಭಾಷೆಯಲ್ಲಿ ವ್ಯಾಮೋಹವೋ ಎನ್ನುವಷ್ಟು ಆಸಕ್ತಿ ಆತನಿಗಿತ್ತು. ಬೆಂಗಳೂರಿನಲ್ಲಿರುವಾಗ ಆತನು ಇಂಗ್ಲಿಷನ್ನು ಮನೆಯಲ್ಲಿಯೇ ಕಲಿತು ಅದರಲ್ಲಿ ಸಾಕಷ್ಟು ಪರಿಚಯವನ್ನು ಪಡೆದಿದ್ದನು. ಈ ವಿಷಯದಲ್ಲಿ ಡಾ. ಪಲ್ಪುವಿನ ಕುಟುಂಬದವರೂ ತುಂಬಾ ಸಹಕಾರಿಯಾಗಿದ್ದರು. ಬೆಂಗಳೂರು ಮದ್ರಾಸುಗಳಲ್ಲಿ ಇಂಗ್ಲೀಷಿನ ಉತ್ತಮ ಜ್ಞಾನವಿಲ್ಲದಿದ್ದರೂ ನಡೆಯುತ್ತಿತ್ತು. ಆದರೆ ಕಲ್ಕತ್ತೆಯಲ್ಲಿ ಅದರ ಜ್ಞಾನ ತೀರ ಆವಶ್ಯಕವಾಯಿತು. ಆದುದರಿಂದ ಆಶಾನನು ಇಂಗ್ಲೀಷನ್ನು ತುಂಬಾ ಅಕ್ಕರೆಯಿಂದ ಕಲಿತನು. ಆತನು ಇಂಗ್ಲೀಷು ಭಾಷೆ ಮತ್ತು ಅದರ ಸಾಹಿತ್ಯವನ್ನು ಕಲಿತಂತೆಲ್ಲಾ ಅವನಿಗೆ ಅದರಲ್ಲಿ ಅಭಿರುಚಿ ಹೆಚ್ಚುತ್ತಾ ಹೋಯಿತು. ಇಂಗ್ಲೀಷಿನ ಮೇಲಣ ಮೆಚ್ಚುಗೆ ಮತ್ತು ದಿನನಿತ್ಯಜೀವನದಲ್ಲಿ ಇಂಗ್ಲೀಷು ಭಾಷೆಯ ಉಪಯೋಗ, ಇವುಗಳಿಂದ ಆ ಭಾಷೆಯಲ್ಲಿ ಒಳ್ಳೆಯ ಪ್ರಾವೀಣ್ಯ ಬಂತು. ಆ ಮೇಲಿನ ವರ್ಷಗಳಲ್ಲಿ ಆತನು ಬರೆಯುತ್ತಿದ್ದ ಕವಿತೆಗಳ ಮೊದಲ ಟಿಪ್ಪಣಿ, ಇಡುತ್ತಿದ್ದ ದಿನಚರಿ ಇವುಗಳಲ್ಲಿ ಉಪಯೋಗಿಸುತ್ತಿದ್ದುದು ಇಂಗ್ಲೀಷನ್ನೇ.

ಇಂಗ್ಲೀಷಿನಲ್ಲಿ ಆತನಿಗಿದ್ದ ಬಳಕೆಗೆ ಇದು ದೃಷ್ಟಾಂತವಾಗಿದೆ. ತಿರುವಾಂಕೂರಿನ ಶಾಸನಸಭೆಯಲ್ಲಿ ಆತನು ಇಂಗ್ಲೀಷಿನಲ್ಲಿಯೇ ಮಾತನಾಡುತ್ತಿದ್ದನು. ಇಂಗ್ಲೀಷಿನಲ್ಲಿ ಮಾತನಾಡುವ ರೂಢಿ ಆತನಿಗೆ ಬಂದುದು ಆತನು ಕೇರಳದಿಂದ ದೂರವಿದ್ದ ಆ ಐದು ವರ್ಷಗಳಲ್ಲಿಯೇ. ಇಂಗ್ಲೀಷ್ ಭಾಷೆಯಲ್ಲಿ ಆತನಿಗೆ ಒಳ್ಳೆಯ ಹಿಡಿತ ವಿತ್ತೆಂದೂ, ಆದರೆ ಆತನ ಉಚ್ಚಾರ ಅಷ್ಟು ಹಿತಕರವಾಗಿರಲಿಲ್ಲವೆಂದೂ ಆತನ ಇಂಗ್ಲೀಷು ಭಾಷಣಗಳನ್ನು ಕೇಳಿದವರು ಅಭಿಪ್ರಾಯ ಪಡುತ್ತಿದ್ದರು.

ಆಶಾನನು ಕಲ್ಕತ್ತೆಯಲ್ಲಿದ್ದಾಗ ರವೀಂದ್ರನಾಥ ಠಾಕೂರರಿಗೆ ಪ್ರಾಯ ನಲ್ವತ್ತರ ಸಮೀಪದಲ್ಲಿತ್ತು. ಠಾಕೂರರ ಹಲವು ರೊಮ್ಯಾಂಟಿಕ್ ಕವಿತೆಗಳು ಇಷ್ಟರಲ್ಲಿಯೇ ಪ್ರಕಟವಾಗಿದ್ದುವು. ರೊಮ್ಯಾಂಟಿಸಿಸಮಿನ ಬಲವಾದ ತರಂಗವೊಂದು ಅಂದಿನ ಬಂಗಾಳ ಸಾಹಿತ್ಯದಲ್ಲಿ ರಭಸದಿಂದ ಉದಯವಾಗಿತ್ತು. ನಮ್ಮ ಕವಿಯೂ ಇದರಿಂದ ಪ್ರಭಾವಿತನಾಗದೆ ಉಳಿದಿಲ್ಲ. ಠಾಕೂರರ ಮೇಲೆ ಆಶಾನನಿಗಿದ್ದ ಗೌರವವು ಅವರು ಕೇರಳಕ್ಕೆ 1922 ರಲ್ಲಿ ಬಂದಾಗ ಆಶಾನನು ರಚಿಸಿ ವಾಚಿಸಿದ 'ದಿವ್ಯಕೋಕಿಲ' ವೆಂಬ ಕವಿತೆಯಲ್ಲಿಯೂ ಆಲ್ವಾಯಿಯಲ್ಲಿದ್ದ ಅದ್ವೈತಾಶ್ರಮವನ್ನು ಸಂದರ್ಶಿಸಿದಾಗ ಕವಿಗೆ ಸಮರ್ಪಿಸಿದ 'ಸ್ವಾಗತಪಂಚಕ'ವೆಂಬ ಕವಿತೆಯಲ್ಲಿಯೂ ಸ್ಪಷ್ಟವಾಗಿದೆ. ತನ್ನ ವಿಮರ್ಶಾಲೇಖನಗಳಲ್ಲಿಯೂ ಆಶಾನನು ಠಾಕೂರರ ಕುರಿತು ಪ್ರಸ್ತಾಪಿಸಿದ್ದಾನೆ. ಬಂಗಾಳಿ ಸಾಹಿತ್ಯದ ಮೇಲಾದ ಪಾಶ್ಚಾತ್ಯ ಪ್ರಭಾವವು ಆಶಾನನ ಲಕ್ಷ್ಯವನ್ನು ಸೆಳೆದಿರಲೇ ಬೇಕು. ಬಂಗಾಳಿ ಭಾಷೆಯಲ್ಲಿ ಹೆಚ್ಚಿನ ಪರಿಚಯ ಆತನಿಗೆ ಇರಲಿಲ್ಲವಾದುದರಿಂದ ಶೆಲ್ಲಿ, ಕೀಟ್ಸ್, ಬ್ರೌನಿಂಗ್, ಇವರ ಕವನಗಳನ್ನು ಮೂಲದಲ್ಲಿ ಆತನು ನೋಡಿರಬೇಕು. ಈ ಕವಿಗಳನ್ನು ಆತನು ಬಹುವಾಗಿ ಮೆಚ್ಚಿರುವನೆಂಬುದಕ್ಕೆ ತುಂಬಾ ನಿದರ್ಶನಗಳಿವೆ. ಕಲ್ಕತ್ತೆಯಲ್ಲಿ ಆತನು ಕಳೆದ ಕಾಲವು ಕುಮಾರನ್ ಆಶಾನನಿಗೆ ಇಂಗ್ಲೀಷ್ ಸಾಹಿತ್ಯದ ಬಾಗಿಲನ್ನು ತೆರೆದಿತ್ತು.

ಆಶಾನನ ಜೀವನದ ಇನ್ನೊಂದು ಮುಖದ ವಿಕಾಸವನ್ನೂ ನಾವಿಲ್ಲಿ ಹೇಳಬೇಕಾಗಿದೆ. ಸ್ವಾಮಿಯಲ್ಲಿದ್ದ ಆತನ ಆಸಕ್ತಿಯು ಭಕ್ತಿಯ ರೂಪದಲ್ಲಿತ್ತು. ತಾಯ್ತಂದೆಗಳಲ್ಲಿದ್ದ ಆಸಕ್ತಿಯು ರಕ್ತಸಂಬಂಧದಿಂದ ಬಂದ ಪ್ರೇಮ. ಅದರಲ್ಲಿ ವಿಶೇಷವೇನೂ ಹೇಳತಕ್ಕುದಿಲ್ಲ. ಏನಾದರೂ ಹೇಳಬೇಕಿದ್ದರೆ ಅದು ಹೆತ್ತವರಲ್ಲಿ ತೋರಿಸುತ್ತಿದ್ದ ಅನಾಸಕ್ತಿ ಅಷ್ಟೆ. ಈ ಅನಾಸಕ್ತಿಗೆ ಕಾರಣವೇನನ್ನೂ ಹೇಳಲಾಗುವುದಿಲ್ಲ. ಡಾ. ಪಲ್ಪುವಿನಲ್ಲಿ ಆಶಾನನಿಗಿದ್ದ ಆಸಕ್ತಿ ಪ್ರೇಮಕೃತಜ್ಞತೆಗಳ ಮಿಶ್ರಣವಾಗಿತ್ತು. ಶ್ರೀಮತಿ ಪಲ್ಪು ಮತ್ತು ಅವಳ ಮಕ್ಕಳು ಆಶಾನನಲ್ಲಿ ಪ್ರೇಮವನ್ನು ತೋರುತ್ತಿದರು. ಹೆಚ್ಚಿನ ತಿಷ್ಟೆಯನ್ನು ವಹಿಸಿದ್ದರು. ಇವು ಆತನಲ್ಲಿದ್ದ ಮಾನಸಿಕ ಸಂಬಂಧದ ಅನುಭವಕ್ಕೆ ಇನ್ನೊಂದು ಮುಖವನ್ನು ಕೊಟ್ಟಿತು. ಡಾ. ಪಲ್ಪುವೂ ಆಶಾನನೂ ರಕ್ತಸಂಬಂಧಿಗಳಲ್ಲದಿದ್ದರೂ ಡಾ. ಪಲ್ಪುವಿನ ಮನೆಯು ಆಶಾನನಿಗೂ ಮನೆಯಾಗಿತ್ತು. ಪಲ್ಪುವಿನ ಮನೆಯಲ್ಲಿ ಆಶಾನನು ತುಂಬಾ ಸುಖಿಯಾಗಿದ್ದನು.

ಗೆರಸೊಪ್ಪೆ ಜಲಪಾತದ ಕುರಿತು ಆಶಾನನು ಕವಿತೆಯೊಂದನ್ನು ಬರೆದಿದಾನೆ. ಪೂರ್ವಯೋಜನೆಯಾಗಿದ್ದಂತೆ ಆತನು ಡಾ. ಪಲ್ಪುವನ್ನೂ ಆತನ ಕುಟುಂಬವನ್ನು

ಗೆರಸೊಪ್ಪೆ ಜಲಪಾತದ ಬಳಿ ಸಂಧಿಸಿದನು. ಇದು ಸಂಭವಿಸಿದುದು ಆಶಾನನು ಬೆಂಗಳೂರಿನಲ್ಲಿದ್ದ ಅವರ ಮನೆಯನ್ನು ಬಿಟ್ಟು ಹನ್ನೊಂದು ವರ್ಷಗಳಾದ ಮೇಲೆ. ಆಶಾನನಿಗೆ ಆ ಕುಟುಂಬದಲ್ಲಿದ್ದ ನಿಕಟ ಬಳಕೆಯು ಈ ಕವಿತೆಯಲ್ಲಿ ವ್ಯಕ್ತವಾಗುತ್ತಿದೆ.

ಹಿಂದೆ ನೋಡಿದಂತೆಯೇ, ಆಶಾನನು ಕೆಲ ತಿಂಗಳುಗಳನ್ನು ಡಾ. ಸಂಜುಂಡ ರಾಯರ ಮನೆಯಲ್ಲಿ ಕಳೆದನು. ಕಲ್ಕತ್ತೆಯಲ್ಲಿರುವಾಗ ಒಂದು ಬ್ರಾಹ್ಮಣ ಕುಟುಂಬ ದೊಡನೆ ಆತನು ಜೀವನ ಮಾಡಿದನು. ಅವರಿಗೂ ಆತನಲ್ಲಿ ತುಂಬಾ ವಿಶ್ವಾಸವೇರ್ಪ ಟ್ಟಿತು. ಆ ಪಟ್ಟಣವನ್ನು ಆತನು ಬಿಡಬೇಕಾಗಿ ಬಂದಾಗ, ಆ ಮನೆಯವರೆಲ್ಲರೂ ಆತನನ್ನು ಬೀಳ್ಕೊಳ್ಳುವುದಕ್ಕೆ ಬೆಳಗಿನ ಜಾವಕ್ಕೆ ಮೊದಲೇ ರೈಲು ನಿಲ್ದಾಣಕ್ಕೆ ಬಂದರು. ಆತನು ಅವರನ್ನು ಬಿಟ್ಟುಹೋಗುತ್ತಿದ್ದಾಗ, ಅವರು ನಿಜವಾಗಿಯೂ ಅತ್ತೇ ಬಿಟ್ಟರು. ಆಶಾನನಿಗೆ ಆ ಕುಟುಂಬದೊಡನಿದ್ದ ಸ್ನೇಹದ ಹೆಚ್ಚಿನ ವಿವರ ನಮಗೆ ತಿಳಿದಿಲ್ಲ. ಆದರೆ ಈ ಸಂದರ್ಭದಲ್ಲಿ ಆಶಾನನ ಮಾತೊಂದು ನೆನಪಿಗೆ ಬರುತ್ತದೆ. ಆತನು ಹೇಳುತ್ತಿದ್ದಂತೆ ಇನ್ನೂ ಕೆಲ ಕಾಲ ಆತನು ಅಲ್ಲಿ ಇರುವಂತಾಗಿದ್ದರೆ ಬಹುಶಃ ಒಬ್ಬ ಬಂಗಾಳಿ ಹುಡುಗಿಯನ್ನು ಮದುವೆಯಾಗಿ ಅಲ್ಲಿಯೇ ನೆಲಸಿಬಿಡುತ್ತಿದ್ದನಂತೆ. ಆದರೆ ಮಲಯಾಳ ಸಾಹಿತ್ಯದ ಅದೃಷ್ಟ ಗಟ್ಟಿ! ಅದು ಹಾಗಾಗಲಿಲ್ಲ!

ಕೇರಳದಿಂದ ಹೊರಗಿದ್ದ ಬಂಗಾಳಿ, ಕನ್ನಡಿಗ, ಮಳಲಯಾಳಿ ಮನೆತನಗಳಲ್ಲಿ ಆತನು ನಡೆಸಿದ ಜೀವನವೂ, ಉಪಾಧ್ಯಾಯರು, ವಿದ್ಯಾರ್ಥಿಗಳು ಮತ್ತು ವಿವಿಧ ಹಿನ್ನೆಲೆಗಳ ಸಾಹಿತಿಗಳು, ಇವರ ಸಂಪರ್ಕವೂ ಕೂಮಾರನ್ ಆಶಾನನ ಜೀವನದ ಆದರ್ಶವನ್ನು ವಿಶಾಲಪಡಿಸಿದುವು. ತನ್ನ ಜೀವನದ ವ್ಯಾಸಂಗಕ್ಕೆ ಮುಖ್ಯವಾದ ಆದಿಭಾಗದಲ್ಲಿ ಇಂತಹ ಸಂದರ್ಭ ಕೇರಳದ ಯಾವ ಕವಿಗೂ ಸಿಕ್ಕಿಲ್ಲ. ವಲ್ಲತ್ತೋಳರಿಗೆ ಭಾರತದ ಮತ್ತು ಜಗತ್ತಿನ ವಿವಿಧ ಭಾಗಗಳನ್ನು ಸಂದರ್ಶಿಸುವ ಸಂದರ್ಭ ಬಂತು. ಆದರೆ ಅದು ಬಂದುದು ಸ್ವಲ್ಪ ತಡವಾಗಿ ಜೀವನದ ಕೊನೆಯ ಭಾಗದಲ್ಲಿ. ಆಶಾನನು ಈ ಅನುಭವದಲ್ಲಿ ಸ್ವಲ್ಪ ಅದೃಷ್ಟಶಾಲಿ. ಈ ಅದೃಷ್ಟವೇ ಆತನನ್ನು ಅಂತಹ ಉನ್ನತ ಕವಿಯಾಗಿಸಲು ಸಾಧನವಾಯಿತು.

## 4. ಸಮಾಜದ ಕರೆ

ಆಶಾನನು ಕಲ್ಕತ್ತೆಯಿಂದ ಕೇರಳಕ್ಕೆ ಹಿಂದಿರುಗಿದಾಗ ಸಹಜವಾಗಿಯೇ ಆತನು ತನ್ನ ಗುರುವೂ ಹಿತಚಿಂತಕನೂ ಆದ ನಾರಾಯಣಗುರುವಿನಲ್ಲಿಗೆ ಹೋದನು. ಹೀಗೆ ಅರುವಿಪ್ಪುರ ಆಶ್ರಮವು ತಿರುಗಿ ಆತನ ವಾಸಸ್ಥಾನವಾಯಿತು. ಸ್ವಾಮಿಗೆ ಆತನ ಕಾರ್ಯದಲ್ಲಿ ಇನ್ನಷ್ಟು ಸಾಮರ್ಥ್ಯದಿಂದ ಧ್ಯೇಯಧೋರಣೆಗಳ ಸುಸ್ಪಷ್ಟ ಅರಿವಿನಿಂದ

ಆಶಾನನು ಸಹಾಯಮಾಡಿದನು. ಆಗ ಅವನಿಗೆ ಇಪ್ಪತ್ತೇಳು ವರ್ಷ. ಆತನ ದೃಷ್ಟಿ ವಿಶಾಲವಾಗಿತ್ತು. ಹೆಚ್ಚಿನ ಪಕ್ವತೆಯನ್ನು ಹೊಂದಿತ್ತು. ಸ್ವಾಮಿಯ ಮುಂದಾಳುತನದಲ್ಲಿ ಏರ್ಪಡಿಸಲಾದ ಎಳವರಿಗೆ ಸಂಬಂಧಿಸಿದ ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಕ್ರಮಗಳು ಅಷ್ಟರಲ್ಲಿ ಹೆಚ್ಚಿನ ವ್ಯಾಪ್ತಿಯನ್ನು ಹೊಂದಿದ್ದುವು. ಆ ಸಣ್ಣ ಸಂಸ್ಥೆಯನ್ನು ಪುನರ್ವ್ಯವಸ್ಥೆಗೊಳಿಸಬೇಕೆಂಬುದನ್ನೂ ಅದರ ಕಾರ್ಯಕ್ರಮಗಳನ್ನು ವಿಸ್ತರಿಸಬೇಕೆಂಬುದನ್ನೂ ಆ ಸಂಸ್ಥೆಯ ನಾಯಕರು ಮನಗಂಡರು. ಇದಕ್ಕೆ ಮೂಲಭಾವಿಯಾಗಿ ಅದನ್ನು ಒಂದು ಸಂಘವಾಗಿ ದಾಖಲೆ ಮಾಡಬೇಕಾಗಿತ್ತು. ಹೀಗೆ 'ಶ್ರೀ ನಾರಾಯಣ ಧರ್ಮ ಪರಿಪಾಲನ ಯೋಗ'ವು 1902ರಲ್ಲಿ ಎಳವರ ಧಾರ್ಮಿಕ ಸಾಮಾಜಿಕ ಶೈಕ್ಷಣಿಕ ಹಿತರಕ್ಷಣೆಗಾಗಿ ಒಂದು ಸಂಘವೆಂದು ದಾಖಲುಮಾಡಲ್ಪಟ್ಟಿತು. ನಾರಾಯಣಗುರುವು ಅದರ ಖಾಯಂ ಅಧ್ಯಕ್ಷನಾಗಿದ್ದನು. ಈ ಯೋಜನೆಯ ಶಿಲ್ಪಿಯಾದ ಡಾ. ಪಲ್ಪುವು ಉಪಾಧ್ಯಕ್ಷನಾಗಿ ಚುನಾಯಿತನಾದನು. ಕಾರ್ಯದರ್ಶಿಯ ಸ್ಥಾನಕ್ಕೆ ಕುಮಾರನ್ ಆಶಾನನು ಸರ್ವಾನುಮತದಿಂದ ಆಯ್ಕೆಗೊಂಡನು. ಇದಕ್ಕಿಂತ ಉತ್ತಮ ಕಾರ್ಯನಿರ್ವಾಹಕ ಸಮಿತಿಯನ್ನು ಊಹಿಸಲಿಕ್ಕೇ ಸಾಧ್ಯವಾಗದು. ಈ ಯೋಗದ ಕಾರ್ಯಾಲಯವು ತಿರುವನಂತಪುರದಲ್ಲಿ ಸ್ಥಾಪಿತವಾಯಿತು.

ಆಶಾನನು ಈ ಯೋಗಕ್ಕಾಗಿ ತನ್ನೆಲ್ಲ ಸಮಯವನ್ನೂ ತನುಮನಗಳನ್ನೂ ಸಂಪೂರ್ಣವಾಗಿ ಧಾರೆಯೆರೆದನು. ಇದರ ಪರಿಣಾಮವಾಗಿ ಆ ಸಂಘವು ಕೆಲವೇ ವರ್ಷಗಳಲ್ಲಿ ಸರ್ವತೋಮುಖವಾದ ಅಭಿವೃದ್ಧಿಯನ್ನು ಹೊಂದಿತು. ವಿಶೇಷವಾಗಿ ಈ ಯೋಗದ ಮೊದಲ ವರ್ಷಗಳಲ್ಲಿ ಆಶಾನನಿಗೆ ಕವಿತಾರಚನೆಗೆ ಸಮಯವೇ ದೊರೆಯಲಿಲ್ಲ. ಈ ಯೋಗದ ಶಾಖೆಗಳು ದಕ್ಷಿಣದಲ್ಲಿ ಕನ್ಯಾಕುಮಾರಿಯಿಂದ ಉತ್ತರದಲ್ಲಿ ಮಂಗಳೂರಿನವರೆಗೆ ಅನೇಕ ಎಡೆಗಳಲ್ಲಿ ಸ್ಥಾಪಿತವಾದುವು. ಎಳವರು ಅಂದು ತುಂಬಾ ಅನಾನುಕೂಲತೆಗಳನ್ನು ಅನುಭವಿಸುತ್ತಿದ್ದರು. ಈ ಶತಮಾನದ ಮೊದಲಭಾಗದಲ್ಲಿದ್ದ ಅವರ ಸ್ಥಿತಿಗತಿಗಳನ್ನು ಇಂದು ಊಹಿಸುವುದೂ ಕಷ್ಟ. ಕಳೆದ ನಾಲ್ಕೈದು ದಶಕಗಳಿಂದ ಪರಿಸ್ಥಿತಿಯು ಗುರುತುಹಿಡಿಯಲು ಸಾಧ್ಯವಾಗದಷ್ಟು ಬದಲಾಯಿಸಿದೆ. ಆದುದರಿಂದ ಈಗ ನಾವು ಸ್ಟೇಟ್ ಮಾನ್ಯುವಲ್‌ಗಳನ್ನೂ ಚರಿತ್ರೆಯ ಪುಸ್ತಕಗಳನ್ನೂ ಓದಿದಾಗ ಅಂದಿನ ಶೋಚನೀಯ ಪರಿಸ್ಥಿತಿಯು ತಿಳಿದು ನಮಗೇ ಆಶ್ಚರ್ಯವಾದೀತು. ತನ್ನ ವರ್ಗವು ಅನುಭವಿಸುತ್ತಿರುವ ಸಂಕಷ್ಟಗಳು ಆಶಾನನಲ್ಲಿ ಬಲವಾದ ಪರಿಣಾಮವನ್ನುಂಟುಮಾಡಿದುವು. ತನ್ನ ವರ್ಗದ ಸಂಕಷ್ಟಗಳ ಪರಿಹಾರಕ್ಕಾಗಿ ಮನೋವಾಕ್ಕಾಯಗಳಿಂದ ತನ್ನ ಜೀವನಸರ್ವಸ್ವವನ್ನೇ ಸಮರ್ಪಿಸಲಿಕ್ಕಾಗಿ ಆಶಾನನು ನಿಶ್ಚಯಿಸಿದನು. ಆತನ ಸುಸಂಘಟಿತವಾದ ಕಾರ್ಯಕ್ರಮಗಳಿಂದ ಆತನ ವರ್ಗದವರ ಬೇಡಿಕೆಗಳು ನ್ಯಾಯಬದ್ಧವಾದುವೆಂದು ಇಡೀ ದೇಶವೇ ತಿಳಿಯುವಂತಾಯಿತು.

ಧಾರ್ಮಿಕ, ಸಾಮಾಜಿಕ ಮತ್ತು ಶೈಕ್ಷಣಿಕ ರಂಗಗಳಲ್ಲಿ ಯೋಗವು ತನ್ನ ಪ್ರಯತ್ನಗಳನ್ನೆಲ್ಲಾ ಕೇಂದ್ರೀಕರಿಸಿತ್ತು. ಮೊದಲಿನ ಹಂತಗಳಲ್ಲಿ ಯೋಗವು ರಾಜಕೀಯಮುಖಕ್ಕೆ ಹೆಚ್ಚಾಗಿ ಗಮನವನ್ನು ಹರಿಸಲಿಲ್ಲ. ಸಾರ್ವಜನಿಕ ರಸ್ತೆಗಳಲ್ಲಿ

ಸಂಚಾರದ ನಿರ್ಬಂಧವನ್ನು ತೆಗೆದುಹಾಕುವುದು, ಸಾರ್ವಜನಿಕ ಹಣವನ್ನು ಉಪಯೋಗಿಸುತ್ತಿರುವ ಶಾಲಾಕಾಲೇಜುಗಳಿಗೆ ಪ್ರವೇಶದ ಹಕ್ಕು, ಸಾರ್ವಜನಿಕ ಹಣದ ಬೆಂಬಲವಿರುವ ಎಲ್ಲಾ ದೇವಾಲಯಗಳಿಗೆ ಪ್ರವೇಶದ ಹಕ್ಕು, ಇವುಗಳನ್ನು ಯೋಗವು ಮುಂದಾಗಿ ಸಾಧಿಸಬೇಕೆಂದು ನಿಶ್ಚಯಿಸಿತ್ತು. ಮುನ್ನಡೆಯುತ್ತಿರುವ ಆಧುನಿಕ ಸಮಾಜವು ಅಸ್ಪೃಶ್ಯತೆಗೂ ಅಸಾಮೀಪ್ಯತೆಗೂ ಎಡೆಕೊಡದು. ಕೀಳು ಜಾತಿಯವನು ಮುಸ್ಲಿಮನಾಗಿ ಅಥವಾ ಕ್ರೈಸ್ತನಾಗಿ ಮತಾಂತರ ಹೊಂದಿದರೆ ಮೇಲಿನ ಎರಡು ಅನಾನುಕೂಲತೆಗಳು ಒಡನೆಯೇ ಮಾಯವಾಗುತ್ತಿದ್ದುವು. ಆದರೆ ಈ ಅನಾನುಕೂಲತೆಗಳಿಂದ ತಪ್ಪಿಸಿಕೊಳ್ಳುವಂತೆ ಸಾಮೂಹಿಕ ಮತಾಂತರವನ್ನು ಸೂಚಿಸಲು ಡಾ. ಪಲ್ಪುವಿಗೆ ಮತ್ತು ಆಶಾನನಿಗೆ ಮನಸ್ಸಿರಲಿಲ್ಲ. ತೀಯ ಜಾತಿಯವರಿಗೆ ತೀಯ ಜಾತಿಯ ಮತಾಭಿಮಾನವಿರಬೇಕು. ಯೋಗದ ಆರನೇ ವಾರ್ಷಿಕ ಸಮ್ಮೇಳನದಲ್ಲಿ ಡಾ. ಪಲ್ಪುವು ಅಧ್ಯಕ್ಷಸ್ಥಾನದಿಂದ ಕೊಟ್ಟ ಭಾಷಣವೂ, ಇಪ್ಪತ್ತನೇ ವಾರ್ಷಿಕ ಸಮ್ಮೇಳನದಲ್ಲಿ ಆಶಾನನು ಅಧ್ಯಕ್ಷಸ್ಥಾನದಿಂದ ಕೊಟ್ಟ ಭಾಷಣವೂ ಈ ಅಭಿಪ್ರಾಯವನ್ನು ವಿಶದವಾಗಿ ಸಮರ್ಥಿಸುತ್ತವೆ.

ಶೀಘ್ರವಾಗಿ ವರ್ಧಿಸುತ್ತಿರುವ ಎಸ್. ಎನ್. ಡಿ. ಪಿ. ಯೋಗದ ಕಾರ್ಯದರ್ಶಿಯಾಗಿದ್ದ ಆಶಾನನಿಗೆ ಬಿಡುವೇ ಇರಲಿಲ್ಲ. ಸಮಾಜದ ಶಾಖೆಗಳನ್ನು ಏರ್ಪಡಿಸುತ್ತ, ಭಾಷಣಗಳನ್ನು ಮಾಡುತ್ತ, ಜಗಳಗಳನ್ನು ತೀರಿಸುತ್ತ, ಹೆಚ್ಚಿನ ಧನಸಹಾಯವಿಲ್ಲದೆಯೇ ಕೇಂದ್ರ ಕಾರ್ಯಾಲಯವನ್ನು ಪ್ರತಿನಿಧಿಸುತ್ತ ಆತನು ಕೇರಳದ ಉದ್ದಗಲಕ್ಕೂ ಪ್ರಯಾಣಮಾಡಬೇಕಾಗಿತ್ತು. ತಮಗಿರುವ ಅನಾನುಕೂಲತೆಗಳ ಅರಿವಿಲ್ಲದೆ ಅಜ್ಞಾನದಲ್ಲಿ ಮುಳುಗಿದ್ದ ಜನತೆಯನ್ನು ಅವನು ಎಬ್ಬಿಸಬೇಕಿತ್ತು. ಆ ವರ್ಗದ ಹೆಚ್ಚಿನ ಜನಸಮೂಹವು ಇದ್ದುದರಲ್ಲಿಯೇ ತೃಪ್ತಿಪಡುವಂತೆ ತೋರುತ್ತಿತ್ತು. ರೂಢಿಯಲ್ಲಿದ್ದ ವ್ಯವಸ್ಥೆಯನ್ನು ಪ್ರಶ್ನಿಸಲು ಅವರಿಗೆ ಮನಸ್ಸಿರಲಿಲ್ಲ. ಈ ಆಲಸ್ಯವನ್ನು ಹೋಗಲಾಡಿಸಿ ಆರೋಗ್ಯಕರವಾದ ಅತೃಪ್ತಿಯನ್ನು ಹುಟ್ಟಿಸುವ, ಜ್ಞಾನ ಮತ್ತು ಸಮತೆಗಳಿಗಾಗಿ ಕಾತರತೆಯನ್ನು, ಬದಲಾವಣೆಗಾಗಿ ಹಂಬಲವನ್ನು ಉಂಟುಮಾಡುವ ಬೃಹತ್ ಕಾರ್ಯವನ್ನು ಯೋಗವು ಕಾರ್ಯದರ್ಶಿಯ ಮುಂದೆ ಇಟ್ಟಿತ್ತು. ಇವೆಲ್ಲವನ್ನೂ ದಕ್ಷತೆಯಿಂದ, ಶ್ಲಾಘನೀಯವಾದ ಸಹನೆಯಿಂದ ಮತ್ತು ಕಾರ್ಯಸಿದ್ಧಿಯ ತೃಪ್ತಿಯಿಂದ ಆತನು ನಿರ್ವಹಿಸಿದನು.

ಎಳವ ಗಜೆಟ್ ಎಂದು ಆ ಮೇಲೆ ಕರೆಯಲಾದ 'ವಿವೇಕೋದಯಂ' * ಎಂಬ ಪತ್ರಿಕೆಯೊಂದನ್ನು ಸಂಪಾದಿಸಿ ಪ್ರಕಟಿಸುವ ಇನ್ನೊಂದು ಜವಾಬ್ದಾರಿಯೂ ಆತನ ಮೇಲೆ ಹೇರಲ್ಪಟ್ಟಿತು. ಪತ್ರಿಕೆಯ ಮೊದಲ ಸಂಚಿಕೆಯನ್ನು ಎಪ್ರಿಲ್ 1904 ರಲ್ಲಿ ಪ್ರಕಟಿಸಲಾಯಿತು. ಮನಮುಟ್ಟುವ ಲೇಖನಗಳು, ಶಾಖೆಗಳ ನಿರ್ವಹಣೆಯ ಕುರಿತಾದ ಸೂಚನೆಗಳು, 'ಯೋಗ'ದ ವರ್ತಮಾನಗಳು, ಇವೇ ಮೊದಲಾದ ಇನ್ನಿತರ

---

* ಆಶಾನನಿಗೂ ಯೋಗದ ಇತರ ವ್ಯವಸ್ಥಾಪಕರಿಗೂ ಸ್ವಾಮಿ ವಿವೇಕಾನಂದರ ಮೇಲಿದ್ದ ಗೌರವಾದರಗಳನ್ನು ಸೂಚಿಸಲು ಈ ಪತ್ರಿಕೆಗೆ 'ವಿವೇಕೋದಯ' ವೆಂಬ ಹೆಸರನ್ನು ಕೊಡಲಾಗಿತ್ತು.

ಸಾಹಿತಿಕ ಸಾಂಸ್ಕೃತಿಕ ಅಭಿರುಚಿಯ ವಿಷಯಗಳು ಈ ಪತ್ರಿಕೆಯಲ್ಲಿ ಪ್ರಕಟವಾದುವು. ಈ ಪತ್ರಿಕೆಯು 'ಯೋಗ'ದ ವಿಷಯಗಳಿಗಾಗಿಯೇ ಮೀಸಲಾಗಿತ್ತು. ಇದು ಕೆಲವರ್ಷಗಳನ್ನು ಹೊರ ಪ್ರಾಂತಗಳಲ್ಲಿ ಫಲಪ್ರದವಾಗಿ ಕಳೆದು ಹುಟ್ಟೂರಿಗೆ ಹಿಂದಿರುಗಿದ ಕವಿಗೆ ತನ್ನ ಪ್ರತಿಭೆಯನ್ನು ತೋರಿಸಿಕೊಳ್ಳುವ ಉತ್ತಮ ರಂಗಭೂಮಿಯಾಗಿತ್ತು. ಆಶಾನನ ಸಂಬಂಧದಿಂದಾಗಿ 'ವಿವೇಕೋದಯ'ವೆಂಬ ಈ ಪತ್ರಿಕೆಯು ತಮ್ಮ ವರ್ಗದ ವಿಷಯಗಳನ್ನೇ ತಿಳಿಸುವ ಪತ್ರಿಕೆಯಾಗಿ ಉಳಿಯಲಿಲ್ಲ. ಕೇರಳದ ಸಾಹಿತಿಗಳಿಗೂ ಈ ಪತ್ರಿಕೆ ಪ್ರಿಯವಾಯಿತು. ಸಾಹಿತಿಕ, ಸಾಮಾಜಿಕ ಮತ್ತು ರಾಜಕೀಯ ರಂಗಗಳ ಕುರಿತಾದ ಲೇಖನಗಳು ಈ ಪತ್ರಿಕೆಯಲ್ಲಿ ಬರತೊಡಗಿದುವು. ಇದರ ಸಂಪಾದಕನಾದ ಕುಮಾರನ್ ಆಶಾನನಿಗೆ ಈ ಪತ್ರಿಕೆಯಿಂದಾಗಿ ಅಧಿಕಾರ ಗೌರವಗಳು ಪ್ರಾಪ್ತವಾದುವು. ಈ ಪತ್ರಿಕೆಯ ಸಂಪಾದಕೀಯಗಳು ತರ್ಕಬದ್ಧವಾದ ವಾದಸರಣಿಯಿಂದ ಕೂಡಿ ಶಕ್ತಿಯುತವಾದ ಗದ್ಯಶೈಲಿಯಲ್ಲಿ ಬರೆಯಲಾಗಿವೆ.

ಯೋಗದ ವಾರ್ಷಿಕ ಸಭೆಗಳೊಡನೆ ಎರಡು ಔದ್ಯೋಗಿಕ ಪ್ರದರ್ಶನಗಳ ವ್ಯವಸ್ಥೆಗೆ ಆಶಾನನೇ ಕಾರಣನಾಗಿದ್ದನು ಎಂಬುದು ವಿಸ್ಮಯಜನಕ್ಕ ಆಶ್ಚರ್ಯವನ್ನುಂಟುಮಾಡೀತು. ಎರಡನೇ ವಾರ್ಷಿಕ ಸಭೆಯೊಂದಿಗೆ ಮೊದಲ ಪ್ರದರ್ಶನವು 1904 ರಲ್ಲಿ ಕ್ವಿಲೋನಿನಲ್ಲಿ ನಡೆಯಿತು. ಎರಡನೆಯದು ಕಣ್ಣಾನೂರಿನಲ್ಲಿ ನಾಲ್ಕನೇ ವಾರ್ಷಿಕ ಸಭೆಯೊಂದಿಗೆ 1906 ರಲ್ಲಿ ಜರಗಿತು. ಈ ಪ್ರದರ್ಶನಗಳನ್ನೇರ್ಪಡಿಸುವ ಆಲೋಚನೆ ಹುಟ್ಟಿದುದು ಡಾ. ಪಲ್ಪುವಿನಲ್ಲಿ. ಆದರೆ ಆಶಾನನಲ್ಲಿ ಅಂತಹ ಔದ್ಯೋಗಿಕ ಪ್ರದರ್ಶನಗಳು ಭಾರತದ ಎಲ್ಲೆಡೆಗಳಲ್ಲಿಯೂ ಅಪರೂಪವಾಗಿದ್ದ ಆ ಸಮಯದಲ್ಲಿ ಅವುಗಳನ್ನೇರ್ಪಡಿಸುವ ಕಲ್ಪನೆ ಮತ್ತು ವಿಶ್ವಾಸಗಳಿದ್ದುವು.

## 5. ಸಂಪ್ರದಾಯಬದ್ಧ ಕವಿತೆಗಳು

ಕುಮಾರನ್ ಆಶಾನನಲ್ಲಿ ಕವಿತಾಶಕ್ತಿ ಇತ್ತೆಂಬುದನ್ನು ಸೂಚಿಸುವ ಸಾಧನಗಳು ಹಿಂದೆಯೇ ಇದ್ದಿದ್ದರೂ, ಆತನು ಉತ್ತಮ ದರ್ಜೆಯ ಕವಿ ಎಂಬುದನ್ನು ತಿಳಿಸುವ ಸೂಚನೆಗಳು ಬಂದುದು ಸ್ವಲ್ಪ ತಡವಾಗಿಯೇ. ಇದಕ್ಕೆ ಅನೇಕ ಕಾರಣಗಳಿವೆ. ಕಲ್ಕತ್ತೆಯಿಂದ ಹಿಂದಿರುಗುವಾಗ ಆತನಿಗೆ ಇಪ್ಪತ್ತೇಳುವರ್ಷ. ಆತನು ಹಿಂದಿರುಗಿದೊಡನೆಯೇ ನಾರಾಯಣ ಗುರುವಿನ ಆಶ್ರಮವನ್ನು ಸೇರಿ ಧಾರ್ಮಿಕ ಸಾಮಾಜಿಕ ಕಾರ್ಯಗಳಲ್ಲಿ ನಿಮಗ್ನನಾದನು. ಮತ್ತೆರಡು ವರ್ಷಗಳೊಳಗೆ ಎಸ್. ಎನ್. ಡಿ. ಪಿ. ಯೋಗದ ಶ್ರಮದಾಯಕವೂ ಜವಾಬ್ದಾರಿಯುತವೂ ಆದ ಪ್ರಧಾನ ಕಾರ್ಯದರ್ಶಿಯ ಅಧಿಕಾರವನ್ನು ವಹಿಸಿದನು. ಆ ಮೇಲಿನ ಐದು ವರ್ಷಗಳವರೆಗೆ ಆತನು

ಯೋಗದ ದೈನಂದಿನ ಆಡಳಿತೆಯನ್ನು ರೂಪಿಸುವಲ್ಲಿ ನಿರತನಾಗಿದ್ದುದರಿಂದ ಕವಿತಾರಚನೆಗೆ ಸಮಯವಾಗಲಿ ಹುರುಪಾಗಲಿ ಆತನಿಗಿರಲಿಲ್ಲ. ತನ್ನ ಮೂವತ್ತೈದು ವರ್ಷ ಪ್ರಾಯದಲ್ಲಿಯೇ ಆಶಾನನ ಕವಿತಾದೃಷ್ಟಿ ಒಂದು ನಿರ್ದಿಷ್ಟಸ್ವರೂಪವನ್ನು ಪಡೆಯಿತು. ಇದನ್ನು ಆತನು 1908 ರಲ್ಲಿ ರಚಿಸಿದ 'ಒರು ವೀಣ ಪೂವು' (ಒಂದ ಬಿದ್ದ ಹೂ) ಎಂಬ ಕವಿತೆಯಲ್ಲಿ ನಾವು ಕಾಣುವೆವು. ಬಾಲಿಶ ಪ್ರಯತ್ನಗಳ ಮತ್ತು ಕವಿತೆಯು ಸುಸ್ಪಷ್ಟರೂಪವನ್ನು ಹೊಂದುವ ಈ ಘಟ್ಟದ ನಡುವಿನ ಕಾಲವು ಪೂರ್ಣ ಬಂಜರಾಗಿರಲಿಲ್ಲ. ಕವಿತೆಯ ಸೇವೆ ಮತ್ತು 'ಯೋಗ'ದ ಸಂಘಟನಾ ಸೇವೆ ಇವೆರಡೂ ಆತನ ಇದಿರಿಗಿದ್ದುವು. ಇವೆರಡರಲ್ಲಿ ಸಮಾಜದ ಕರೆಯು ಆತನ ಮೊದಲ ಆಯ್ಕೆಯಾಗಿಬಿಟ್ಟಿತು. ಆತನಲ್ಲಿ ಕವಿತಾ ಪ್ರೇರಣೆ ನಿಶ್ಚಯವಾಗಿ ಇದ್ದಿದ್ದರೂ ಒಬ್ಬ ಗಣ್ಯಕವಿಯಾಗಿ ಆತನಿನ್ನೂ ಹೆಸರು ಗಳಿಸಿರಲಿಲ್ಲ. ಹೀಗೆ ಕಾವ್ಯರಂಗಪ್ರವೇಶಕ್ಕೆ ಇನ್ನೂ ಸ್ವಲ್ಪಕಾಲ ಕಾಯಬೇಕಾಗಿತ್ತು.

ಹಾಗಿದ್ದರೂ 'ಯೋಗ'ದ ಅಧಿಕಾರದ ಜವಾಬುದಾರಿಯನ್ನು ವಹಿಸುವ ಮೊದಲಿನ ಎರಡು ವರ್ಷಗಳಲ್ಲಿ ಆಶಾನನು ಈ ಮುಂದಿನ ಕೃತಿಗಳನ್ನು ರಚಿಸಿರುವುದನ್ನು ನಾವು ಅಲಕ್ಷಿಸುವಂತಿಲ್ಲ.

1. ಸೌಂದರ್ಯಲಹರಿ (ಭಾಷಾಂತರ) 1901
2. ಶಿವಸ್ತೋತ್ರಮಾಲೆ 1902
3. ಮೇಘಸಂದೇಶಂ (ಅಪೂರ್ಣ ಭಾಷಾಂತರ) 1902
4. ವಿಚಿತ್ರವಿಜಯಂ (ನಾಟಕ) 1902.
5. ಪ್ರಬೋಧ ಚಂದ್ರೋದಯಂ (ಭಾಷಾಂತರ) 1902.

ಇವುಗಳಲ್ಲಿ ಮೊದಲನೆಯದೂ, ಮೂರನೆಯದೂ, ಐದನೆಯದೂ, ಸಂಸ್ಕೃತ ಕೃತಿಗಳ ಭಾಷಾಂತರ. ನಾಲ್ಕನೆಯದಾದ ವಿಚಿತ್ರವಿಜಯವು ಸುಪ್ರಸಿದ್ಧ ಸಂಸ್ಕೃತ ನಾಟಕಗಳನ್ನು ಮಾದರಿಯಾಗಿಟ್ಟುಕೊಂಡು ಬರೆದ ನಾಟಕ. ಎರಡನೆಯದು ಹೆಸರೇ ಸೂಚಿಸುವಂತೆ ಸ್ತೋತ್ರಪದ್ಯಗಳಿಂದ ಕೂಡಿದುದು. ಈ ಕೃತಿಗಳ ವಿಷಯ, ರಚನೆ, ಇವುಗಳನ್ನು ಪರಿಶೀಲಿಸದೆಯೇ ಇವು ಸಂಪ್ರದಾಯಬದ್ಧ ಕವಿತೆಗಳೆಂದು ನಾವು ತೀರ್ಮಾನಕ್ಕೆ ಬಂದುಬಿಡಬಹುದು. ಪದ್ಯರಚನೆಯಲ್ಲಿ ಇವುಗಳು ಒಳ್ಳೆಯ ಅಭ್ಯಾಸಗಳು. ಆಶಾನನಿಗೆ ಪದ್ಯರಚನಾವೃತ್ತಿಯಲ್ಲಿ ಸಾಕಷ್ಟು ಅನುಭವ ಇವುಗಳಿಂದ ದೊರೆತಿರಬೇಕು. ಈ ಶತಮಾನದ ಆದಿಯಲ್ಲಿ ಕೇರಳದಲ್ಲಿ ಪ್ರಚಾರದಲ್ಲಿದ್ದ ಕವಿತೆಗಳೆಂದರೆ, ಸಂಸ್ಕೃತ ಸಾಹಿತ್ಯಕೃತಿಗಳ ಅನುಕರಣವಾದ, ಅತಿಯಾದ ಅಲಂಕಾರಗಳಿಂದ ಕೂಡಿದ, ಸಂಸ್ಕೃತ ಛಂದಸ್ಸು ಪದ್ಯನಿಯಮಗಳಿಗೆ ಅನುಸಾರವಾಗಿ ಬರೆದ ಕವಿತೆಗಳು. ಸಂಸ್ಕೃತ ಮಲಯಾಳಗಳ ಬೆರಕೆಯುಳ್ಳ ಭಾಷೆಯನ್ನು ಇಲ್ಲಿ ಬಳಸಲಾಗಿತ್ತು. ಸಂಸ್ಕೃತ ಮಾದರಿಯನ್ನು ಇಲ್ಲಿ ಅನುಸರಿಸಿತ್ತು.

ಅತ್ಯಂತ ವೇಗವಾಗಿ ಓಡುವ ಆಟಗಾರನೂ ಕೆಳವಟ್ಟದಿಂದಲೇ ಮೇಲಕ್ಕೆ ಬರುತ್ತಾನೆ. ಹಾಗೆಯೇ ಪ್ರತಿಭಾವಂತ ಕವಿಯೂ ಅನುಕರಣದಿಂದ ಆರಂಭಿಸಿದರೂ ಆಮೇಲೆ ಅದನ್ನು ಮೀರಿ ಸ್ವತಂತ್ರನಾಗಬೇಕಾಗುತ್ತದೆ. ಕೆಲವು ಕವಿಗಳಿಗೆ ಈ

ಸಿದ್ಧತೆಯು ಕಾಲ ಕಡಮೆ. ಕೆಲವರಿಗೆ ಹೆಚ್ಚು. ಈ ಹೆಚ್ಚುಕಡಮೆಯು ಕೆಲವುಟ್ಟಿಗೆ ಸಂಬಂಧಪಟ್ಟ ಕವಿಯ ಮನೋಭಾವವನ್ನೂ ಕೆಲವುಟ್ಟಿಗೆ ಕವಿಯ ಸಂದರ್ಭ ಸನ್ನಿವೇಶಗಳನ್ನೂ ಹೊಂದಿಕೊಂಡಿದೆ. ಹೇಗಿದ್ದರೂ ಉತ್ತಮ ಕವಿಯಾಗಲು ಸಹಕಾರಿಯಾದ ಯುಕ್ತ ಸಾಧನಗಳನ್ನೆಲ್ಲಾ ನಮಗೆ ಕಂಡುಹಿಡಿಯಲು ಸಾಧ್ಯವಿಲ್ಲದುದರಿಂದ, ಒಬ್ಬ ಕವಿಯು ಒಂದು ವಿಶಿಷ್ಟವಾದ ರೀತಿಯಲ್ಲಿ ಏಕೆ ವರ್ತಿಸುತ್ತಾನೆ ಎನ್ನುವುದನ್ನು ವಿವರಿಸುವುದು ಸುಲಭವಲ್ಲ.

ಮೇಲೆ ಹೇಳಿದ ಮೂರು ಭಾಷಾಂತರಗಳು ಪದ್ಯರಚನೆಯಲ್ಲಿ ಒಳ್ಳೆಯ ಅಭ್ಯಾಸಗಳೆಂದು ನಾವು ಗಣಿಸಬಹುದು. ಇದಕ್ಕಿಂತ ಹೆಚ್ಚು ಇಲ್ಲಿ ಹೇಳಬೇಕಾದುದಿಲ್ಲ. ಶಿವಸ್ತೋತ್ರಮಾಲೆಯು ಇಪ್ಪತ್ತೊಂದು ಪುಟಗಳುಳ್ಳ ಒಂದು ಪುಟ್ಟ ಕೃತಿ. ಇದಕ್ಕೆ ಕವಿಯೇ ಬರೆದ ಒಂದು ವೈಶಿಷ್ಟ್ಯಯುತವಾದ ಮುನ್ನುಡಿ ಇದೆ. ಆ ಪದ್ಯಗಳಷ್ಟೇ ಸ್ವಾರಸ್ಯಪೂರ್ಣವಾಗಿದೆ ಈ ಮುನ್ನುಡಿ. ಅಂತರಂಗದ ಶಾಂತಿಸಂತಸಗಳಿಗೆ ಭಕ್ತಿಗೀತಗಳಷ್ಟು ಉತ್ತಮವಾದುದು ಬೇರೆ ಯಾವುದೂ ಇಲ್ಲ. ದೇವರಲ್ಲಿ ನಂಬಿಕೆ ಇರುವವನಿಗೆ ಇವು, ದೇವಸ್ಥಾನಗಳೂ ವಿಗ್ರಹಗಳೂ ಕೊಡಲಾಗದ ಸುಖಸಂತೋಷಗಳನ್ನು ಕೊಡುತ್ತವೆಂದು ಕವಿಯು ಹೇಳುತ್ತಾನೆ. ಉತ್ತಮತರ್ಕದಿಂದ ಯುಕ್ತಪ್ರತೀಕಗಳಿಂದ ಆತನು ಭಕ್ತಿಗೀತಗಳ ಯೋಗ್ಯತೆಯನ್ನು ಕುರಿತು ಓದುಗನು ತನ್ನ ಅಭಿಪ್ರಾಯಗಳನ್ನು ಒಪ್ಪಿಕೊಳ್ಳುವಂತೆ ಮಾಡುತ್ತಾನೆ. ವಿಷಯಾನುಭವದಿಂದ ಮನಸ್ಸನ್ನು ಸೆಳೆದು ಅದನ್ನು ಸರ್ವಶಕ್ತನಾದ ಭಗವಂತನಲ್ಲಿ ಐಕ್ಯಗೊಳಿಸಿ ಪಾರಮಾರ್ಥಿಕಸುಖವನ್ನು ಅನುಭವಿಸುವಂತೆ ಮಾಡಲು ಈ ಭಕ್ತಿಗೀತಗಳು ಸಹಾಯಮಾಡುತ್ತವೆ.

## ವಿಚಿತ್ರ ವಿಜಯಂ

ಈ ನಾಟಕದ ಹಸ್ತಲಿಖಿತ ಪ್ರತಿಯನ್ನು ನೋಡುವಾಗ ಇದರ ರಚನೆಯು 1902 ಸಪ್ಟಂಬರ 19 ರಲ್ಲಿ ಆರಂಭವಾಯಿತೆಂದು ತಿಳಿಯುವುದು. ಯಾವಾಗ ಪೂರ್ತಿಯಾಯಿತೆಂದು ಪ್ರತಿಯಲ್ಲಿ ತಿಳಿಸಿಲ್ಲ. ನಿಜವಾಗಿಯೂ ಇದು ಪೂರ್ತಿಯಾಗಿಲ್ಲ. ಈ ನಾಟಕವು ಸ್ಥಳೀಯ ಜನಪ್ರಿಯತೆಯನ್ನು ಗಳಿಸಿತಾದರೂ, ಆಶಾನನು ಇದನ್ನು ಪ್ರಕಟಿಸಲು ಮನಸ್ಸುಮಾಡಲಿಲ್ಲ. ಆತನ ಅಭಿಪ್ರಾಯದಂತೆ ಅದು ಪ್ರಕಟನ ಯೋಗ್ಯವಾಗಬೇಕಾಗಿದ್ದರೆ ವಿಶೇಷ ಪರಿಷ್ಕೃತವಾಗಬೇಕಾಗಿತ್ತು. ಆದುದರಿಂದ ಅದು ಆತನು ಗತಿಸಿದಮೇಲೆ ಪ್ರಕಟಿತವಾಯಿತಷ್ಟೆ. ಇದು ಪೂರ್ಣವಾಗಿ ಕೊನೆಗೊಂಡಿದೆಯೆಂದು ಹೇಳಬಾರದಾಗಿದ್ದರೂ, ಸುಮಾರಾಗಿ ಪೂರ್ತಿಯಾಗಿದೆಯೆಂದು ಹೇಳಬಹುದು. ಸಾಂಪ್ರದಾಯಿಕವಾದ ಭರತವಾಕ್ಯ ಮೊದಲಾದುವುಗಳು ಮಾತ್ರ ಇದರಲ್ಲಿ ಲೋಪವಾಗಿವೆ. ಈಗ ಇದು ಜನರ ಲಕ್ಷ್ಯವನ್ನು ಅಷ್ಟಾಗಿ ಸೆಳೆದಿಲ್ಲವಾದರೂ ಹೆಚ್ಚಿನ ಅವಗಾಹನೆಗೆ ಯೋಗ್ಯವಾಗಿದೆ ಈ ನಾಟಕ.

ಒಂದು ಪುರಾತನ ಕತೆಯನ್ನಾಧರಿಸಿ ಈ ನಾಟಕವು ಐದಂಕಗಳಲ್ಲಿ ರಚಿತವಾಗಿದೆ. ಈ ಕತೆಯ ಮೂಲ ಯಾವುದೆಂದು ನಿಶ್ಚಿತವಾಗಿ ಇನ್ನೂ ತಿಳಿದಿಲ್ಲ.

ಕಾಶಿಯ ರಾಜನಾದ ಬ್ರಹ್ಮದತ್ತನು ಕೋಸಲ ರಾಜನಾದ ದೀರ್ಘಧೀಯನ್ನು ಸೋಲಿಸುವನು, ಅನೇಕ ವರ್ಷಗಳಮೇಲೆ ದೀರ್ಘಧೀಯು ತನ್ನ ಸತಿಸುತರೊಡನೆ ಕಾಶಿಯಲ್ಲಿ ಕುಂಬಾರರ ಒಂದು ಹಳ್ಳಿಯಲ್ಲಿ ವೇಷಮರೆಸಿ ವಾಸಿಸುತ್ತಿರುವನೆಂಬ ವರ್ತಮಾನ ಬ್ರಹ್ಮದತ್ತನಿಗೆ ದೊರೆಯಿತು. ದೀರ್ಘಧೀಯನ್ನು ಕೊಲ್ಲಲು ಬ್ರಹ್ಮದತ್ತನು ಆಜ್ಞೆಯನ್ನು ಹೊರಡಿಸುವನು. ದೀರ್ಘಧೀಗೆ ಈ ವಿಷಯ ತಿಳಿದರೂ ಆತನು ತಪ್ಪಿಸಿಕೊಳ್ಳಲು ಯತ್ನಿಸುವುದಿಲ್ಲ. ರಾತ್ರಿಯಲ್ಲಿ ಸೈನಿಕರು ಬಂದು ಆತನ ಹೆಂಡತಿಯ ಇದಿರು ಆತನನ್ನು ಹೊಡೆದು ಆತನ ಕಣ್ಣೆದಿರಿನಲ್ಲೇ ಆತನ ಪತ್ನಿಯನ್ನು ಅವಮಾನಿಸುವರು. ಆಮೇಲೆ ಅವರು ಆತನನ್ನು ನದಿಯ ಎದುರು ತೀರಕ್ಕೆ ಕೊಂಡೊಯ್ಯುವರು. ಅಲ್ಲಿ ಆತನ ಶಿರಚ್ಛೇದಮಾಡಲು ದೋಣಿಯಲ್ಲಿ ಕೊಂಡೊಯ್ಯುತ್ತಿದ್ದಾಗ ಆತನು ತನ್ನ ಪತ್ನಿಯ ಶವವು ನದಿಯಲ್ಲಿ ತೇಲುತ್ತಿರುವುದನ್ನು ಕಾಣುವನು. ಆಕೆಯು ನದಿಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಂಡುದು ತಿಳಿದುಬರುವುದು. ಕೋಸಲ ರಾಜನ ಮಗನಾದ ದೀರ್ಘಬಾಹುವು ಆ ಸಮಯದಲ್ಲಿ ಗುರುವಿನೊಡನೆ ದೂರದಲ್ಲಿದ್ದನು. ತನ್ನ ತಂದೆಗೊದಗಿದ ದುರಂತವನ್ನು ಕೇಳಿ ತಂದೆಯಲ್ಲಿಗೆ ಓಡಿಬರುವನು. ಮುಯ್ಯಿಗೆ ಮುಯ್ಯಿ ತೀರಿಸಬಾರದು, ದ್ವೇಷಕ್ಕೆ ಪ್ರತಿಯಾಗಿ ದ್ವೇಷವನ್ನು ತೋರಿಸಬಾರದು, ಪ್ರೀತಿಯನ್ನೇ ತೋರಿಸಬೇಕು ಎಂಬುದೇ ಆತನ ತಂದೆಯ ಕೊನೆಯ ಹಿತವಾದ. ಆದರೆ ಆತನು ಈ ಹಿತವಾದವನ್ನು ಅರ್ಥಮಾಡಿಕೊಳ್ಳುವ, ಮೆಚ್ಚುವ ಪರಿಸ್ಥಿತಿಯಲ್ಲಿ ಇರಲಿಲ್ಲ.

ಅನೇಕ ವರ್ಷಗಳು ಗತಿಸಿದ ಮೇಲೆ ದೀರ್ಘಬಾಹುವು ಬ್ರಹ್ಮದತ್ತನ ಮಗಳಾದ ಪ್ರೇಮಲತಳ ಸಂಗೀತಾಚಾರ್ಯನಾಗುವನು. ಆತನಿಗೆ ಪ್ರೇಮಲತಳ ಮೇಲೆ ಪ್ರೇಮ, ಆದರೆ ಆಕೆಯ ತಂದೆಯ ಮೇಲೆ ದ್ವೇಷ. ತನ್ನ ಹಿಂದಿನ ಸೇಡುತೀರಿಸಿಕೊಳ್ಳಬೇಕೆಂದು ಆತನು ಬಯಸುವನು. ಈ ಒಳತೋಟಿಯನ್ನು ಕವಿಯು ಅತ್ಯುತ್ತಮ ಶೈಲಿಯಲ್ಲಿ ಚಿತ್ರಿಸಿರುವನು. ಈ ನಾಟಕದ ಪ್ರಣಯದೃಶ್ಯಗಳು ಚಿತ್ತಾಕರ್ಷಕವಾಗಿವೆ. ಆಧ್ಯಾತ್ಮಿಕ ಪ್ರವೃತ್ತಿಯುಳ್ಳ ಒಬ್ಬ 'ಚಿನ್ನಸ್ವಾಮಿ'ಯು ಇದನ್ನು ಬರೆದಿರುವನೆಂದು ಊಹಿಸುವುದು ಕಷ್ಟ.

ಒಮ್ಮೆ ರಾಜನು ಬೇಟೆಯಾಡಲು ತನ್ನ ನಂಬಿಗಸ್ಥ ಸಾರಥಿಯೊಡನೆ ಹೋಗುತ್ತಾನೆ. ಈ ಸಾರಥಿಯು ಬೇರೆ ಯಾರೂ ಆಗಿರದೆ ದೀರ್ಘಬಾಹುವೇ ಆಗಿರುತ್ತಾನೆ. ಸಾರಥಿಯು ರಾಜನ ಇತರ ಅನುಯಾಯಿಗಳಿಂದ ದೂರವಾಗಿರುವಂತೆ ರಥವನ್ನು ಕೊಂಡೊಯ್ಯುತ್ತಾನೆ. ರಾಜನು ತನ್ನ ಖಡ್ಗವನ್ನು ದೀರ್ಘಬಾಹುವಿಗೊಪ್ಪಿಸಿ ಮಾರ್ಗಾಯಾಸದಿಂದ ನಿದ್ರಿಸುತ್ತಾನೆ. ತನ್ನ ತಂದೆಯ ಸೇಡನ್ನು ತೀರಿಸಿಕೊಳ್ಳಲು ದೀರ್ಘಬಾಹುವಿಗೆ ಈಗ ಒಂದು ಅಪೂರ್ವಯೋಗವು ದೊರೆಯುತ್ತದೆ. ಆತನು ತನ್ನ ವೈರಿಯನ್ನು ಕೊಂದರೆ, ತನ್ನ ಪ್ರಿಯೆಯು ಅನಾಥೆಯಾಗುತ್ತಾಳೆ. ಕೊಲ್ಲದಿದ್ದರೆ ತನ್ನ ತಂದೆಯ ಋಣವನ್ನು ತೀರಿಸಿದಂತಾಗುವುದಿಲ್ಲ. ಈ ಒಳತೋಟಿಯು ಆತನನ್ನು ಸಾಕಷ್ಟು ಹಿಂಸೆಗೊಳಿಸುತ್ತದೆ. ಕಟ್ಟಕಡೆಗೆ ತನ್ನ ಖಡ್ಗವನ್ನೆತ್ತುತ್ತಾನೆ. ಆಗ ಆತನಿಗೆ ಒಂದು ದನಿಯು ಕೇಳಬರುತ್ತದೆ. ಆ ಅಪೂರ್ವದನಿಯು ತನ್ನ ತಂದೆಯು

ಅಂತಿಮಕಾಲದಲ್ಲಿ ಕೊಟ್ಟ ಉಪದೇಶ. ಖಡ್ಗವು ಕೈಯಿಂದ ಕಳಬೀಳುತ್ತದೆ ಅದರ ಹಿಡಿಯು ರಾಜನನ್ನು ಮುಟ್ಟುತ್ತದೆ. ಆತನು ಎಚ್ಚರಾಗುವಾಗ ದೀರ್ಘಬಾಹುವು ಆತ್ಮಹತ್ಯೆಗೆ ಉದ್ಯುಕ್ತನಾಗಿರುವುದನ್ನು ನೋಡುತ್ತಾನೆ. ರಾಜನು ಆತನನ್ನು ತಡೆಯುತ್ತಾನೆ. ಮುಂದೆ ಬರುವ ಅವರಿಬ್ಬರೊಳಗಿನ ಸಂಭಾಷಣೆಯು ಎಲ್ಲವನ್ನೂ ಸರಿಪಡಿಸುತ್ತದೆ.

ಕೊನೆಯದಾದ ಐದನೇ ಅಂಕದಲ್ಲಿ ದೀರ್ಘಬಾಹುವು ಪ್ರೇಮಲತಳನ್ನು ಮದುವೆಯಾಗುತ್ತಾನೆ. ಯುವರಾಜ ಪದವಿಯನ್ನು ಹೊಂದುತ್ತಾನೆ. ಕಾಶಿಯ ರಾಜನು ವಾನಪ್ರಸ್ಥವನ್ನು ಸ್ವೀಕರಿಸುತ್ತಾನೆ. ಹೀಗೆ ಕತೆಯು ವಿಚಿತ್ರವಿಜಯದಲ್ಲಿ ಕೊನೆಗೊಳ್ಳುತ್ತದೆ. ಈ ನಾಟಕದ ಮೇಲೆ ಶಾಕುಂತಲವು ನೇರವಾಗಿ ಪ್ರಭಾವ ಬೀರಿರುವುದನ್ನು ನೋಡಬಹುದು. ಶ್ಲೋಕಗಳು ಸಂಪ್ರದಾಯಬದ್ಧವಾದ ವೃತ್ತಗಳಲ್ಲಿ ದೋಷರಹಿತವಾಗಿ ರಚಿತವಾಗಿವೆ. ಸಂಪ್ರದಾಯದ ಅಚ್ಚಿನಲ್ಲಿ ಈ ನಾಟಕವು ಎರಕಹೊಯ್ದಿದ್ದರೂ ಹಲವು ಸ್ವತಂತ್ರಗುಣಗಳು ಇಲ್ಲಿವೆ. ಅರುವಿಪ್ಪುರದಲ್ಲಿರುವಾಗ ಆಶಾನನು 'ಮಾರ್ಕಂಡೇಯ ವಿಜಯ'ವೆಂಬ ಇನ್ನೊಂದು ನಾಟಕವನ್ನೂ ಬರೆದನು. ಈ ಕೈಬರಹದ ಪ್ರತಿಯು ಅಪೂರ್ಣವಾಗಿದ್ದು ಇನ್ನೂ ಮುದ್ರಿತವಾಗಿಲ್ಲ.

ಮೂರನೆಯ ಅಧ್ಯಾಯದಲ್ಲಿ ತಿಳಿಸಿರುವಂತೆ ಆಶಾನನಿಗೆ ಕಲ್ಕತ್ತೆಯಲ್ಲಿರುವಾಗ ಆಂಗ್ಲವಂಗಸಾಹಿತ್ಯಗಳಲ್ಲಿದ್ದ ರೊಮ್ಯಾಂಟಿಕ್ ಪ್ರಭಾವವನ್ನು ಚೆನ್ನಾಗಿ ಅರ್ಥ ಮಾಡಿಕೊಂಡು ಅರಗಿಸಿಕೊಳ್ಳುವ ಸುಯೋಗ ಒದಗಿತ್ತು. ಆಗ ಆತನಿಗೆ ಪ್ರಾಯ ಇಪ್ಪತ್ತೇಳರ ಹತ್ತಿರ. ಆದರೆ ಆತನಿಗೆ ಮೂವತ್ತೈದುವರ್ಷ ತುಂಬುವವರೆಗೆ ಆತನ ವೈಶಿಷ್ಟ್ಯ ಸಹಜತೆಗಳು ರೂಪುಗೊಂಡಿರಲಿಲ್ಲ. ಆತನು ಆಗ ಹೆಚ್ಚು ಬರೆದಿರಲಿಲ್ಲ. ಬರೆದಿದ್ದುದು ಈಗ ತಾನೇ ನಾವು ನೋಡಿದ ಸಂಪ್ರದಾಯಬದ್ಧಕೃತಿಗಳು ಮಾತ್ರ. ಹೀಗೆ ಆತನಲ್ಲಿ ವೈಶಿಷ್ಟ್ಯ ಸಹಜತೆಗಳು ತಡವಾಗಿ ರೂಪುಗೊಂಡುದಕ್ಕೆ ಎಸ್. ಎನ್. ಡಿ. ಪಿ. ಯೋಗದ ಸಂಘಟನೆಯ ಕೆಲಸದಲ್ಲಿ ಆತನು ನಿಮಗ್ನನಾಗಿದ್ದನೆಂಬುದು ಸರಿಯಾದ ವಿವರಣೆಯೆಂದು ತೋರುವುದಿಲ್ಲ.

ಆಶಾನನ ಮನಸ್ಸನ್ನು ದೊಡ್ಡ ಚಿಟ್ಟೆಹುಳದ ಗಾಜಿನ ಹೂಜಿಯಾಕಾರದ ರೇಷ್ಮೆಯ ಗೂಡಿಗೆ ಬಹುಶಃ ಹೋಲಿಸಬಹುದು. ಅದರ ರಚನೆ ತುಂಬಾ ವಿಚಿತ್ರವಾದುದು. ಆ ಗಾಜಿನ ಹೂಜಿಯ ಕುತ್ತಿಗೆಯ ದ್ವಾರ ಸಪೂರವಾಗಿದೆ. ಅದರ ಮೂಲಕ ಆ ಚಿಟ್ಟೆಯು ದಾರಿ ಮಾಡಿಕೊಂಡು ಹೊರಬರಬೇಕಷ್ಟೆ. ಈ ನಿರ್ಗಮನ ದ್ವಾರಕ್ಕೂ ಆ ಗೂಡಿನೊಳಗಿದ್ದ ಬೃಹತ್ ಚಿಟ್ಟೆಗೂ ಗಾತ್ರದಲ್ಲಿದ್ದ ಅಂತರವನ್ನು ನೋಡುವಾಗ ಅದು ಹೇಗೆ ಹೊರಬಂದಿತೆಂದು ಯಾರಿಗೂ ಆಶ್ಚರ್ಯವಾಗಬೇಕು. ಆ ಚಿಟ್ಟೆಯ ಶರೀರವು ಆ ಸಪೂರ ದ್ವಾರದಿಂದ ಹೊರಬರುವಾಗ ತುಂಬಾ ಒತ್ತಡಕ್ಕೂ ಶ್ರಮಕ್ಕೂ ಗುರಿಯಾಗುತ್ತದೆ. ಇದರಿಂದಾಗಿ ಶರೀರದಲ್ಲಿನ ಹಲರಸಗಳು ರೆಕ್ಕೆಗಳ ನಾಳಗಳಿಗೆ ಕಳುಹಿಸಲ್ಪಡುತ್ತವೆ. ಈ ಕಾಯಕ್ಕಾಗಿ ಆ ಪ್ರಯಾಸದ ನಿರ್ಗಮನ ಪ್ರಕೃತಿನಿರ್ಮಿತವಾಗಿದೆ. ಈ ಪ್ರಯಾಸದ ಕಾರ್ಯವು ಸ್ವಲ್ಪ ಸಮಯವನ್ನು ತೆಗೆದುಕೊಂಡರೂ ರೆಕ್ಕೆಗಳ ಸಶಕ್ತತೆ, ಕಾಂತಿಯುತವಾದ ವರ್ಣಗಳುಂಟಾಗಲು ಇದು ಅವಶ್ಯವಾಗಿದೆ.

ಕೃತಕ ರೀತಿಯಿಂದ ಈ ನಿರ್ಗಮನವನ್ನು ತ್ವರೆಗೊಳಿಸಿದರೆ ಚಿಟ್ಟೆಯು ಬಾತುಹೋದ ಶರೀರದಿಂದ ಹೊರಬಂದೀತಷ್ಟೆ. ರೊಮ್ಯಾಂಟಿಕ್ ಕವಿಯಾದ ಆಶಾನನೂ ತನ್ನ ಮಾನಸಿಕ ಗೂಡಿನಿಂದ ಹೊರಬರಲು ಸ್ವಲ್ಪ ಕಾಲವನ್ನು ತೆಗೆದುಕೊಂಡನು. ಅವನು ಪರಿಪಕ್ವತೆಯನ್ನು ಹೊಂದುವ ಮೊದಲೇ ರೊಮ್ಯಾಂಟಿಕ್ ಕವಿಯಾಗಿ, ಸುಂದರ ವಾದ ಉಚಿತ ಪ್ರಮಾಣದ ಬೆಳವಣಿಗೆಯನ್ನು ಪಡೆಯದೆ ಬಾತುಹೋದ ಶರೀರದಿಂದ ಕೂಡಿ ನಿರ್ಗಮಿಸದಿದ್ದುದಕ್ಕೆ ನಾವು ಸಂತಸಪಡಬೇಕು.

# 6. ಒಂದು ಬಿದ್ದ ಹೂವು

1908 ರಲ್ಲಿ ಒಂದು ಸುಂದರವಾದ ಚಿಟ್ಟೆಯು ತನ್ನ ಗೂಡಿನಿಂದ ಹೊರಬಂದು, ತನ್ನ ಬಣ್ಣದ ರೆಕ್ಕೆಗಳನ್ನು ಹರಡಿ ಕೇರಳದ ಆಕಾಶದ ಅಡ್ಡಕ್ಕೆ ಹಾರಿ ಕಾವ್ಯಪ್ರೇಮಿ ಗಳನ್ನು ಮರುಳುಗೊಳಿಸಿತು. 'ಒರು ಪೀಣ ಪೂ' (ಒಂದು ಬಿದ್ದ ಹೂ)ವಿನ ಪ್ರಕಟಣೆಯು ಕುಮಾರನ್ ಆಶಾನನ ಕವಿಜೀವನದಲ್ಲಿ ಕಾವ್ಯಾಕಾಶದಲ್ಲಿ ಹಾರಾಡಲು ಆರಂಭಿಸಿದ ಒಂದು ಮಹತ್ವದ ಘಟ್ಟವಾಯಿತು. ಹೊಸಕವಿತೆಯು ವಿಮರ್ಶಕರನ್ನು ಸಂತಸದಿಂದ ರೋಮಾಂಚನಗೊಳ್ಳುವಂತೆ ಮಾಡಿತು. ಕವಿತಾರಚನೆಯಲ್ಲಿ ಒಂದು ಹೊಸಮಟ್ಟವನ್ನು ರೂಢಿಸಿತು. ನಾಲ್ವತ್ತೊಂದು ಶ್ಲೋಕಗಳುಳ್ಳ ಈ ಕವಿತೆಯು ನಿರ್ಮಾಣವು ಆಧುನಿಕ ಮಲಯಾಳಂ ಪದ್ಯಸಾಹಿತ್ಯದ ಇತಿಹಾಸದಲ್ಲಿ ಒಂದು ಮಹತ್ವದ ಘಟ್ಟವಾಯಿತೆಂದು ಹೇಳುವುದರಲ್ಲಿ ಏನೂ ಅತಿಶಯೋಕ್ತಿಯಿಲ್ಲ. ಆ ಕವಿತೆಯು ಮೊದಲಲ್ಲಿ ಪ್ರಸಿದ್ಧ ವಿಮರ್ಶಕನಾದ ಮುರ್ಕೋತ್ ಕುಮಾರನ್ ಎಂಬವನಿಂದ ಸಂಪಾದಿತವಾದ 'ಮಿತ್ರವಾದಿ' ಎಂಬ ಸಂಚಿಕೆಯಲ್ಲಿ ಪ್ರಕಟಿತ ವಾಯಿತು. ಸ್ವಲ್ಪ ಕಾಲದೊಳಗೇ ಇನ್ನೂ ಹೆಚ್ಚು ಪ್ರಸಿದ್ಧವಾದ 'ಭಾಷಾಪೋಷಿಣಿ' ಎಂಬ ಮಾಸಪತ್ರಿಕೆಯಲ್ಲಿ ಸುಪ್ರಸಿದ್ಧ ಸಾಹಿತಿ ಸಿ. ಎಸ್. ಸುಬ್ರಮಣ್ಯಪೋತಿ ಎಂಬವನ ಸುಂದರವಾದ ಮುನ್ನುಡಿಯೊಡನೆ ಮರುಪ್ರಕಟವಾಯಿತು. ಒಂದೇ ರೀತಿಯ, ಕೃತಕವಾದ ಪದ್ಯರಚನೆಗೆ ಕಾರಣವೂ ಕವಿತೆಯ ಉದ್ದೇಶದ ಕುರಿತಾಗಿ ಪ್ರಚಲಿತವೂ ಆಗಿದ್ದ ತಪ್ಪಭಿಪ್ರಾಯಗಳನ್ನು ಆತನು ತನ್ನ ಮುನ್ನುಡಿಯಲ್ಲಿ ವಿವರಿಸಿ ಪರಿಹರಿಸಲು ಪ್ರಯತ್ನಿಸಿದ್ದಾನೆ. ಇದಾದೊಡನೆಯೇ ಮಹಾಕವಿಯೂ ಸಾಹಿತಿಗಳ ಪ್ರೋತ್ಸಾಹಕನೂ ಆದ ಕೇರಳವರ್ಮ ವಲಿಯ ಕೋಯಿಲ್ ತಂಬು ರಾನನಿಂದ ಈ ಕವಿತೆಯು ಮನ್ನಣೆಯನ್ನು ಪಡೆಯಿತು. ಆತನು ತನ್ನ ಅಧ್ಯಕ್ಷತೆ ಯಲ್ಲಿ ಸೇರಿದ ಸಮಿತಿಯಿಂದ ಶಾಲೆಗಳಿಗಾಗಿ ರಚಿತವಾದ ಪಠ್ಯಪುಸ್ತಕದಲ್ಲಿ ಈ ಕವಿತೆಯನ್ನು ಸೇರಿಸಿದನು. 'ವೀಣ ಪೂವು' (ಒಂದು ಬಿದ್ದ ಹೂ) ಹೊಸರೀತಿಯ

ಕವಿತೆಯಾದುದರಿಂದ ಅದು ಸಂತೋಷದಿಂದ ಸ್ವಾಗತಿಸಲ್ಪಟ್ಟಿತು. ಅದು ತನ್ನಲ್ಲಿದ್ದ ಅಂತಸ್ಸತ್ವದಿಂದ ಸಮಕಾಲೀನ ಬರವಣಿಗೆಯ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿತು. ಅಂತಹ ಕವಿತೆಯ ಕರ್ತೃವನ್ನು ವಿಶೇಷ ಕೃತಿರಚನಾ ಸಾಮರ್ಥ್ಯವಿರುವ ಕವಿಯೆಂದು ಪರಿಗಣಿಸಲೇ ಬೇಕಾಯಿತು. ಹೀಗೆ ಆಶಾನನ 'ಬಿದ್ದ ಹೂವು' ಮಲಯಾಳದಲ್ಲಿ ಹಳೆಯ ಅಲಂಕಾರಗಳ ಭಾರದಿಂದ ಜಗ್ಗದೆ ಹೊಸತಾಗಿಯೂ ಭಾವಸ್ಪರ್ಶಿಯಾಗಿಯೂ ಇರುವ ಹೊಸ ಮಾದರಿಯ ಕವಿತೆಗಳ ಅರಳುವಿಕೆಗೆ ನಾಂದಿಯಾಯಿತು.

ಹೂವಿನ ಮೇಲೆ ಅದೂ ಬಿದ್ದ ಹೂವಿನ ಮೇಲೆ ಕವಿತೆಯನ್ನು ರಚಿಸಲು ಪ್ರೇರೇಪಿಸಿದ ಮುಖ್ಯ ಕಾರಣ ಯಾವುದಿತ್ತು? ಬರಿಯ ಒಂದು ಕಾರಣವಾದರೂ ಇತ್ತೇನು? ಇದಕ್ಕೆ ನಿಶ್ಚಯವಾದ ಉತ್ತರವನ್ನು ಹೇಳಲು ಸಾಧ್ಯವಿಲ್ಲ. ಕೆಲಸಮಯ ಒಂದು ಕವಿತೆಯ ರಚನೆಯಲ್ಲಿ ಸಂದರ್ಭಸನ್ನಿವೇಶಗಳು ಪಾತ್ರವಹಿಸುತ್ತವೆ. ಆಶಾನನು ಮನೆಯಿಂದ ದೂರವಿದ್ದಾಗ, ವಿಶೇಷ ಸನ್ನಿವೇಶಗಳಲ್ಲಿ ಸಿಕ್ಕಿಕೊಂಡಿದ್ದಾಗ, ಈ ಕವಿತೆಯನ್ನು ಬರೆದನು. ಮಲಯಾಳ ಶಕ 1083ರ (ಕ್ರಿ. ಶ. 1908ರ) ವೃಷಭ ತಿಂಗಳಲ್ಲಿ ಪಾಲ್ಘಾಟಿನಲ್ಲಿ ತಾನು ಕೆಲದಿನಗಳಿರಬೇಕಾಗಿ ಬಂದಾಗ ಇದನ್ನು ಬರೆದುದಾಗಿ ಆಶಾನನು ತನ್ನ ಕವಿತೆಯ ಚಿಕ್ಕ ಮುನ್ನುಡಿಯಲ್ಲಿ ತಿಳಿಸುತ್ತಾನೆ. ಆತನು ಅಲ್ಲಿ ಯಾಕೆ ಇರಬೇಕಾಗಿ ಬಂದಿತ್ತೆಂದು 'ವಿವೇಕೋದಯ'ದ ಸಂಚಿಕೆಯೊಂದರಲ್ಲಿ ಪ್ರಕಟಪಡಿಸಿದ ಕವಿಯ ಸ್ವಂತ ವಿವರಣೆಯಿಂದ ನಾವು ತಿಳಿಯಬಹುದು. ಕುಮಾರನ್ ಆಶಾನನನ್ನು ಕೂಡಿಕೊಂಡು ನಾರಾಯಣ ಗುರುವು ಕಲ್ಲಿಕೋಟೆಗೆ ಶಿವದೇವಾಲಯವೊಂದನ್ನು ಪ್ರತಿಷ್ಠಾಪಿಸುವ ಮುಖ್ಯೋದ್ದೇಶದಿಂದ ಹೋಗಿದ್ದನು. ಅವರು ಎರ್ನಾಕುಲದಲ್ಲಿದ್ದಾಗ ಗುರುವನ್ನು ವಾಂತಿಭೇದಿ ರೋಗವು ಬಾಧಿಸಿತು. ಪರಿಸ್ಥಿತಿಯು ಬೇಗನೆ ಉಲ್ಬಣಾವಸ್ಥೆಯನ್ನು ಹೊಂದಿತು. ಆತನ ಜೊತೆಯಲ್ಲಿ ಬಂದಿದ್ದ ಒಬ್ಬ ಶಿಷ್ಯನು ಆ ರೋಗದಿಂದಾಗಿ ಮೃತನಾದನು. ಸ್ವಾಮಿಯು ಕೆಲದಿನಗಳ ತನಕ ಶೋಚನೀಯಾವಸ್ಥೆಯಲ್ಲಿದ್ದನು. ಕ್ರಮೇಣ ರೋಗವು ಹತೋಟಿಗೆ ಬಂತು. ಆಮೇಲೆ ಸ್ವಾಮಿಯನ್ನು ಪಾಲ್ಘಾಟಿನಲ್ಲಿದ್ದ ಡಾ. ಕೃಷ್ಣನ್ ಅವರ ಆಸ್ಪತ್ರೆಗೆ ಕೊಂಡೊಯ್ಯಲಾಯಿತು. ಮುಂದಿನ ಚಿಕಿತ್ಸೆಯನ್ನೂ, ವೈದ್ಯಕೀಯ ಆರೈಕೆಯನ್ನೂ ಡಾ. ಕೃಷ್ಣನ್ ಅವರು ನಡೆಸಿದರು. ಆ ಆಸ್ಪತ್ರೆಯ ಸುತ್ತುಮುತ್ತ ಹಲವು ಮರಗಳು ಪುಷ್ಪಭರಿತವಾಗಿದ್ದ ಸಮಯವದು. ಗುರುವಿನ ಅವಸ್ಥೆಯೂ, ವೃಕ್ಷಗಳಿಂದ ಬಿದ್ದ ಹೂವುಗಳೂ ಕವಿಯ ಭಾವನೆಯನ್ನು ಅನುಕರಣೀಯವಾದ ಒಂದು ರೀತಿಯಲ್ಲಿ ಪ್ರಚೋದಿಸಿರಬೇಕು, ಆಶಾನನ ಮನಸ್ಸಿನಲ್ಲಿ ಏನೆಲ್ಲಾ ನಡೆಯಿತೆಂದು ಹೇಳುವುದು ನಮಗೆ ಸಾಧ್ಯವಿಲ್ಲ. ಆದರೆ ಎರಡು ವಿಷಯಗಳನ್ನು ನಿಶ್ಚಯವಾಗಿ ಹೇಳಬಹುದು. ಮೊದಲನೆಯದು ಜೀವನ ಮರಣಗಳ ನಡುವೆ ಉಯ್ಯಾಲಾಡುತ್ತಿದ್ದ ಗುರುವಿನ ಮೇಲೆ ಅತ್ಯಂತ ವ್ಯಾಮೋಹ ಆಶಾನನಿಗಿತ್ತು. ಎರಡನೆಯದಾಗಿ ಆಶಾನನು ಹೆಚ್ಚಿನ ಮಾನಸಿಕ ವೇದನೆಯನ್ನೂ ಕಾತರತೆಯನ್ನೂ ಅನುಭವಿಸುತ್ತಿದ್ದ ಕಾಲದಲ್ಲಿ ಆ ಕವಿತೆಯು ಬರೆಯಲ್ಪಟ್ಟಿತು.

ಆ ಕವಿತೆಯ ಸ್ವರೂಪ ಯಾವುದು ಎಂದು ಈಗ ಯೋಚಿಸೋಣ. ಈ ಅಸ್ಥಿರ ಐಹಿಕ ಜೀವನದ ಅಥವಾ ಪಾರಲೌಕಿಕ ಜೀವನದ ಕುರಿತಾದ ವಿಷಯಗಳಿಗೆ ಈ ಕವಿತೆಯು ಸಂಬಂಧಿಸಿದೆಯೇನು? ಪ್ರತಿಭಾಷೆಯಲ್ಲಿಯೂ ಹೂವುಗಳ ಮೇಲೆ ಹಲವಾರು ಕವಿತೆಗಳು ಬರೆಯಲ್ಪಟ್ಟಿವೆ. ನಿಜವಾಗಿಯೂ ಹೂಗಳ ಮೋಹಕತೆಯನ್ನು ಅನುಭವಿಸದ, ಅವುಗಳ ಕುರಿತು ಬರೆಯದ ಕವಿಯೊಬ್ಬನನ್ನು ಕಂಡುಹಿಡಿಯುವುದೇ ಕಷ್ಟ. ಕಾವ್ಯವಸ್ತುವಿಗೆ ಹೆಚ್ಚಾಗಿ ಒಳಸಿಕೊಳ್ಳುವ ವಿಷಯವದು. ಆದರೆ ಮಣ್ಣಲ್ಲಿ ಒಂದುಗೂಡಿ ಮರೆತುಹೋಗುವ ಒಂದು ಬಿದ್ದ ಹೂವನ್ನು ಕವಿತಾ ಯೋಗ್ಯವೆಂದು ಪರಿಗಣಿಸಿದವರು ತೀರಾ ಸ್ವಲ್ಪ. ಬಿದ್ದ ಹೂವಿನ ವಿಷಯ ಚಿಂತಿಸುತ್ತಾ ಆಶಾನನು ಇಡೀ ಜೀವನವನ್ನೇ ನಮ್ಮ ಕಣ್ಣ ಮುಂದಿರಿಸಿದ್ದಾನೆ. ಶೋಕಗೀತದ ಅನೇಕಾಂಶಗಳು ಈ ಕವಿತೆಯಲ್ಲಿವೆ. ಆತನ ಗುರುವಿನ ಅವಸ್ಥೆಯು ಅಂತಹ ಭಾವನೆಗಳನ್ನು ಆತನು ಚಿಂತಿಸುವಂತೆ ಮಾಡಿರುವುದು ಸಂಭವನೀಯ. ಪ್ರತಿಯೊಂದು ಭಾವನೆಯೂ ಸುಸ್ಪಷ್ಟವಾದ ಒಂದು ಸುಂದರ ಕವಿತೆಯಾಗಿದೆ. 'ಒಂದು ಬಿದ್ದ ಹೂವು' ಯಾರೊಬ್ಬರ ಶೋಕಗೀತವಲ್ಲ, ಆದರೆ ಪ್ರತಿಯೊಬ್ಬರ ಶೋಕಗೀತ. ಅದು ಸಾಂಕೇತಿಕ ಶೋಕಗೀತವಾಗಿರುವುದೇ ಇದಕ್ಕೆ ಕಾರಣ.

ಸಂಪ್ರದಾಯಬದ್ಧ ಕವಿತೆಗಳ ಕುರಿತು ನಾವು ಈಗಾಗಲೇ ಕೆಲವಿಷಯಗಳನ್ನು ಪ್ರಸ್ತಾಪಿಸಿದ್ದೇವೆ. ಕೇರಳದಲ್ಲಿ 19 ನೇ ಶತಮಾನದ ಪ್ರತಿಯೊಬ್ಬ ಪ್ರಮುಖ ಕವಿಯೂ ಸಂಸ್ಕೃತ ಮಾದರಿಯನ್ನನುಕರಿಸಿ ಮಹಾಕಾವ್ಯವನ್ನು ಬರೆಯುವುದು ಅವಶ್ಯಸಾಧನೆಯೆಂದು ತಿಳಿದಿದ್ದನು. ಈ ಧೋರಣೆ ಇಪ್ಪತ್ತನೇ ಶತಮಾನದ ಎರಡನೇ ದಶಕದವರೆಗೆ ಮುಂದರಿಯಿತು. ಒಂದು ಕಾವ್ಯದಲ್ಲಿರಬೇಕಾದ ಅಂಕಗಳ ಸಂಖ್ಯೆ, ಅದರಲ್ಲಿ ಬರಬೇಕಾದ ವರ್ಣನೆಗಳ ರೀತಿ, ಉಪಯೋಗಿಸಬಹುದಾದ ಅಲಂಕಾರ, ಛಂದಸ್ಸುಗಳ ವೈವಿಧ್ಯ, ಮೊದಲಾದ ಬಾಹ್ಯಸಾಧನಗಳಿಗೇ ಹೆಚ್ಚಿನ ಮಹತ್ವವನ್ನು ಅಂತಹ ಕೃತಿಗಳಲ್ಲಿ ಕೊಡಲಾಗುತ್ತಿತ್ತು. ಬಾಹ್ಯಾಲಂಕಾರಗಳನ್ನು ಉಪಯೋಗಿಸುವ ಸಾಮರ್ಥ್ಯದಲ್ಲಿಯೇ ಕವಿಗಳು ಪೈಪೋಟಿ ನಡೆಸುತ್ತಿದ್ದುದರಿಂದ ಕಾವ್ಯದ ಅಂತಸ್ಸತ್ವದ ಕಡೆಗೆ ಅವರು ಗಮನಕೊಡುತ್ತಿರಲಿಲ್ಲ. ಹೀಗೆ ಮಲಯಾಳ ಪದ್ಯಸಾಹಿತ್ಯವು ಸಂಪ್ರದಾಯಕ್ಕೆ ಸಿಕ್ಕಿಬಿದ್ದು ಕುಂಠಿತವಾಗಿದ್ದಾಗ ಆಶಾನನು ಭಾವನಾಪ್ರಧಾನ ವಾದ ರೊಮ್ಯಾಂಟಿಕ್ ಕಾವ್ಯರಚನೆಗೆ ತೊಡಗಿದನು. ಆಶಾನನ ಕವಿಪ್ರತಿಭೆಯ ಈ ಹೊಸ ಮುಖಕ್ಕೆ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಪ್ರಮುಖ ಕಾರಣವಾಗಿದೆ.

ಇದರಿಂದ 'ಬಿದ್ದ ಹೂವು' ರಚನೆಯಾಗುವುದಕ್ಕೆ ಮೊದಲು, ಇಂಗ್ಲೀಷ್ ಕಾವ್ಯದ ಪ್ರಭಾವವನ್ನು ತೋರುವ ಮಲಯಾಳಂ ಪದ್ಯಕೃತಿಗಳೇ ಇದ್ದಿಲ್ಲವೆಂದು ಗಣಿಸಬಾರದು.

ಮಲಯಾಳ ಸಾಹಿತ್ಯದಲ್ಲಿ ಆಗಲೂ ಶೋಕಗೀತಗಳಂತಹ ಕೆಲ ಕವಿತೆಗಳು ಬಂದಿದ್ದುವು. ಸಾಹಿತಿಗಳು ಅವನ್ನು ಓದುತ್ತಿದ್ದರು, ಮೆಚ್ಚುತ್ತಿದ್ದರು. ಆದರೆ ಭಾವಗೀತಗಳಿಗೆ ಹೆಚ್ಚಿನ ಪ್ರಾಶಸ್ತ್ಯ ದೊರೆತುದು 'ಬಿದ್ದ ಹೂವು' ಎಂಬ ಕವಿತೆಯು ಪ್ರಕಟವಾದ ಮೇಲೆ, ಇದಕ್ಕೆ ಇನ್ನೊಬ್ಬ ಸಮಕಾಲೀನ ಮಹಾಕವಿ,

ಉಳ್ಳೂರ್ ಎಸ್. ಪರಮೇಶ್ವರ ಐಯ್ಯರರ ಕೆಳಗಿನ ಮಾತುಗಳಿಗಿಂತ ಹೆಚ್ಚಿನ ಉದಾಹರಣೆ ಬೇಕಾಗಿಲ್ಲ.

"ಮಲಯಾಳ ಸಾಹಿತ್ಯದಲ್ಲಿ 'ಬಿದ್ದ ಹೂವು' ತೋರಿಸಿದ ದಾರಿ ಒಂದು ವೈಶಿಷ್ಟ್ಯದಿಂದ ಕೂಡಿದೆ. ಪಾಶ್ಚಾತ್ಯ ಸಾಹಿತ್ಯದ ಸರಿಯಾದ ಜ್ಞಾನವಿರುವ ಅನೇಕ ಕವಿಗಳು ಹಿಂದೆ ಇದ್ದರು. ಆದರೆ ವಸ್ತುವನ್ನೂ ವರ್ಣನೆಯನ್ನೂ ಪಾಶ್ಚಾತ್ಯ ಶೈಲಿಯಲ್ಲಿ ಮೊದಲಬಾರಿಗೆ ಕವಿತೆಯಲ್ಲಿ ಪರಿಚಯ ಮಾಡಿಸಿದವನು ಆಶಾನನು. ಸಾಹಿತ್ಯಾಕಾಶದಲ್ಲಿ 'ಬಿದ್ದ ಹೂವು' ಅತ್ಯಂತ ಜಾಜ್ವಲ್ಯಮಾನವಾದ ಒಂದು ತಾರೆ.

ಮಲಯಾಳ ಕಾವ್ಯದಲ್ಲಿ ಹೊಸಯುಗದ ಆರಂಭಕ್ಕೆ ಕಾರಣವಾದ ಈ ಸಣ್ಣ ಕವಿತೆಯ ಮಹತ್ವವನ್ನು ವಿವರಿಸುವ ಕೆಲ ಲೇಖನಗಳೂ ಒಂದೆರಡು ಪುಸ್ತಕಗಳೂ ಬಂದಿವೆ. ಆ ಕವಿತೆಯ ಕೆಲ ಪದ್ಯಗಳನ್ನು ನಾವೀಗ ನೋಡಬಹುದು.

ಕವಿಯು ಬಿದ್ದ ಹೂವೊಂದನ್ನು ನೋಡಿ ಅದರ ಜೀವನದ ಪ್ರಮುಖ ಘಟ್ಟಗಳನ್ನು ಮನಸ್ಸಿಗೆ ತಂದುಕೊಳ್ಳುತ್ತಾನೆ. ಪ್ರತಿ ಪದ್ಯವೂ ಪ್ರತಿ ಶಬ್ದವೂ ಒರಿಯ ಸಸ್ಯಜೀವನದ ಅನುಭವಗಳನ್ನು ಸೂಚಿಸದೆ ಮಾನವಜೀವನದ ವಿವಿಧ ಹಂತಗಳನ್ನು ಸಾಂಕೇತಿಕವಾಗಿ ವಿವರಿಸುತ್ತದೆ. ಕವಿತೆಯು ಆರಂಭವಾಗುವುದು ಈ ರೀತಿಯಲ್ಲಿ.

ಆಹ್ ಪುಷ್ಪವೇ ! ನೀನು ಹಿಂದೆ ಅಧಿಕ ಉನ್ನತ ಸ್ಥಾನದಲ್ಲಿ
ರಾಣಿಯಂತೆ ಅದೆಷ್ಟು ಶೋಭಿಸುತ್ತಿದ್ದೆ !
ಈ ಭೂಮಿಯಲ್ಲಿ ಸೌಭಾಗ್ಯವು ಅಸ್ಥಿರ. ಇದು ಅಸಂಶಯ.
ಆ ಹಿಂದಿನ ಮಹಾವಿಭೂತಿ ಸೌಂದರ್ಯಗಳೆಲ್ಲಿ ?
ಬಾಡಿ ಕೆಳಬಿದ್ದಿರುವ ಈ ನಿನ್ನ ದುರವಸ್ಥೆ ಎಲ್ಲಿ ?

ಆ ಹೂವಿನ ಬಾಲ್ಯದ ಕುರಿತು ಕವಿಯು ಈ ರೀತಿ ನಿರೂಪಿಸುವನು;

ನಿನ್ನನ್ನು ಪಡೆದ ಲತೆಯು ಶೈಶವದಲ್ಲಿ ನಿನ್ನನ್ನು ಲಾಲಿಸಿತು.
ನಿನ್ನನ್ನು ಪಲ್ಲವಪುಟಗಳಲ್ಲಿಟ್ಟು ಪಾಲಿಸಿತು.
ಈ ಪಲ್ಲವಪುಟದ ಪುಟ್ಟ ತೊಟ್ಟಿಲನ್ನು
ಮಂದವಾಗಿ ಬೀಸುವ ಗಾಳಿಯ ಮೂಲಕವಾಗಿ ತೂಗಿ
ಎಲೆಗಳ ಮರ್ಮರದ ಜೋಗುಳವನ್ನು ಹಾಡಿತು.

ಆ ಪುಟ್ಟ ಮೋಹಕವಾದ ಮಗು ಪ್ರಬುದ್ಧಪ್ರಾಯವನ್ನು ಪಡೆಯುವುದು.

ಹೀಗೆ ವರ್ಧಿಸುತ್ತ ನಿನ್ನ ಅಂಗವು ಮೋಹಕವಾದ
ಕೆಲ ಭಂಗಿಗಳನ್ನು ಹೊರಹೊಮ್ಮಿಸಿತು.
ನಿನ್ನ ಮುಖವು ಭಾವವನ್ನು ಒಳಕೊಂಡಿತು.
ಕೆನ್ನೆಯು ಕಾಂತಿಯಿಂದ ಬೆಳಗಿತು.
ಹೂವೇ ! ಅವರಲ್ಲಿ ಹೊಸ ಮುಗುಳುನಗೆಯ
ಸಂಚಾರವು ಕಂಡುಬಂತು.

ಮೊದಲ ಪದ್ಯದಲ್ಲಿ ರಾಣಿಯ ಉಪಮೆಯಿಂದ ಆರಂಭವಾಗಿ ಇಲ್ಲಿ ಆ ಹೂವು ಒಂದು ಕಾಮಿನಿಯಂತೆ ಭಾವಿಸಲ್ಪಟ್ಟಿದೆ. ಆ ಮೊಗ್ಗು ಹಾಲಿನಂತೆ ಬಿಳುಪಾದ ಚಂದ್ರನ ಕಿರಣಗಳಲ್ಲಿ ಮಿಂದು, ಉದಯಿಸುವ ಸೂರ್ಯನ ಹಿತೋಷ್ಣವಾದ ಕಿರಣಗಳಲ್ಲಿ ನಲಿದಾಡುತ್ತ ತನ್ನ ಬಾಲ್ಯವನ್ನು ಕಳೆಯಿತು. ಆಮೇಲೆ ಆಕೆಯ ಶರೀರವು ಪ್ರಬುದ್ಧವಾದ ಕಾಂತಿಯಿಂದ ಬೆಳಗಿತು. ಆ ಸೊಗಸು ಹೇಗಿತ್ತು? ಕವಿಯೇ ಹೇಳುವಂತೆ ಅದರಿಂದ ಆಕರ್ಷಿತವಾಗದಿರಲು ಸಾಧ್ಯವೇ ಇರಲಿಲ್ಲ.

ವಿರಕ್ತನಾದ ಒಬ್ಬ ವೈದಿಕನಾಗಿರಲಿ, ವೈರಿಯು
ಎದುರಿನಲ್ಲಿ ಹಿಂದಿರುಗಿ ಹೆದರಿ ಓಡುವ ಭೀರುವಾಗಿರಲಿ,
ತಮ್ಮೆದುರಾಗಿ ವಿಕಸಿತ ವಿಲಾಸಿನಿಯಾಗಿ ನಿಂತಿರುವ
ನಿನ್ನನ್ನು ನೋಡಿ ತುಸುನಿಂತು ನಿನ್ನ ಸೌಂದರ್ಯವನ್ನು
ತಮ್ಮ ಕಣ್ಣುಗಳಿಂದ ಪಾನಮಾಡದೆ ಅದೆಂತು
ತಾನೇ ಅವರು ಮುಂದರಿಯುವರು ?

ಮೋಹಕ ಸೌಂದರ್ಯವುಳ್ಳ ಈ ಸುಂದರಿಯು ಕಾಮುಕರನ್ನು ಆಕರ್ಷಿಸುವುದು ಸಹಜವೇ. ಅಂತಹ ಕಾಮುಕರು ಹಲವರು. ಅವರಲ್ಲಿ ಒಂದು ನೀಲ ಭ್ರಮರವನ್ನಾಯ್ದುಕೊಂಡು ಅನ್ಯರನ್ನೀಕೆಯು ತಿರಸ್ಕರಿಸಿದಳು. ಈ ನಲ್ಲನಲ್ಲೆಯರು ಅದೆಷ್ಟು ಸಂತಸದಿಂದ ಕಾಲಕಳೆದರು! ಆದರೆ ಆ ಕಾಲ ಬಹು ಅಲ್ಪ. ಈಗ ಆ ನಲ್ಲನು ಆಕೆಯ ಮೃತಶರೀರದ ಮೇಲೆ ಬಿದ್ದು ಮೊರೆಯುತ್ತ ರೋದಿಸುವನು.

ನಾನು ನನ್ನ ದೇಹವನ್ನು ಒಮ್ಮೆ, ಎಂದೆಂದಿಗೂ
ಒಬ್ಬನಿಗೇ ಸಂಪೂರ್ಣ ಸಮರ್ಪಿಸಿರುವೆನು ' ಎಂದು
ಹೇಳಿ ' ಅನ್ಯ ಪ್ರಣಯಿಗಳನೆಲ್ಲ ನೀನು ತಿರಸ್ಕರಿಸಿದೆ !
ಓ ನನ್ನ ಮುದ್ದು ಪ್ರಿಯೆ ! ನೀನೆನ್ನ ಕೈಬಿಡದಿರು '

ಎಂದು ಹಲುಬುವಂತೆ ತುಂಬಿಯು ಮೊರೆಯುವುದು. ಆ ಮಧುಪಾತ್ರೆಯು ತುಟಿಯನ್ನು ಸಮೀಪಿಸಿ, ಇನ್ನೇನು, ಮಧುವನ್ನು ಹೀರಬೇಕು, ಎನ್ನುವಷ್ಟರಲ್ಲಿಯೇ ಹಿಂದೆಗೆಯಲ್ಪಟ್ಟಿತು! ಪ್ರೇಮವು ಆತ್ಯಂತಿಕ ಸುಖದ ಹಾಗೆಯೇ ಮಹಾದುಃಖದ ಬುಗ್ಗೆಯೂ ಆಗಿದೆ. ತೋರಿಸಿದ ಪ್ರೇಮಕ್ಕೆ ಅದೇ ಪ್ರಮಾಣದ ಅನುರಕ್ತಿಯಿಂದ ಪ್ರತಿಕ್ರಿಯೆ ದೊರೆಯದಿದ್ದರೆ ಅದು ನಿರಾಶೆಗೂ ಮನಸ್ಸಿನ ಸೋಲಿಗೂ ಎಡೆಕೊಡುತ್ತದೆ. ತನ್ನ ಕೊಳ್ಕೊಡುಗೆಯಿಂದ ಜೀವನವನ್ನು ಬೆಳಗಿಸುವುದರಲ್ಲಿ ಪ್ರೇಮದಂತಹ ವಸ್ತು ಜಗತ್ತಿನಲ್ಲಿಯೇ ಮತ್ತೊಂದಿಲ್ಲ. ಜೀವನವೇ ಅದೃಷ್ಟದ ಕೈಯಲ್ಲಿ ಒಂದು ಆಟದವಸ್ತು. ಜೀವನದ ಬಹು ದೊಡ್ಡ ವೈರಿಯೆಂದರೆ ಮರಣ.

ಹಾ ! ಅಯ್ಯೋ ! ನನ್ನ ಮುದ್ದು ಹೂವೇ,
ಮೃತ್ಯು ತನ್ನ ನಿರ್ದಯ ಕೈಗಳಿಂದ ನಿನ್ನನ್ನು ಹಿಡಿದು
ನಿನ್ನ ಪರಿಮಳದುಸಿರ ಹಿಚುಕಿತಲ್ಲ !

ವನವ್ಯಾಧನು ತಾನು ಕೊಂದುದು ಹದ್ದಾಗಿರಲಿ,
ಕಪೋತವಾಗಿರಲಿ, ಅದರ ಬಗ್ಗೆ ಚಿಂತಿಸುವನೇನು ?

ಆ ಹೂವು ಪ್ರಕೃತಿಯ ಶಿಶು. ಕೃತಾಂತನು ತನ್ನ ಹಸ್ತಕ್ಷೇಪವನ್ನು ಆ ಹೂವಿನ ಮೇಲೆ ಮಾಡಿದಾಗ ಪ್ರಕೃತಿಯೇ ಆ ದುಃಖದಲ್ಲಿ ಭಾಗಿಯಾಗುವುದು.

ಆಹಾ ! ನಿನ್ನ ದೇಹಕ್ಕಾಗಿ ಬಿಳಿ ದುಕೂಲದ ಚರಮಾವರಣ
ವನ್ನು ಸಣ್ಣ ಜೇಡರ ಹುಳು ರಚಿಸಿದುವು.
ಉಷಸ್ಸು ಸ್ನೇಹಾರ್ದ್ರತೆಯಿಂದ ನಿನ್ನ ಮೇಲೆ ನೀಹಾರ
ಶೀಕರಗಳ ಮನೋಹರವಾದ ಅಂತ್ಯಹಾರವನ್ನು ತೊಡಿಸಿತು
ತಾರಕೆಗಳು ನಿನ್ನ ದುರವಸ್ಥೆಯನ್ನು ನೋಡಿ ಶವಿಸಿ
ಹಿಮಕಣಗಳೆಂಬ ಕಣ್ಣೀರನ್ನು ಸುರಿಸುತ್ತಿವೆ. ಅವು
ನೇರವಾಗಿ ನಿಬಿಡಪತ್ರಗಳಿಂದ ಕೂಡಿದ ತರು
ಗಳಿಂದ ನೆಲದಲ್ಲಿ ನಿನ್ನ ಸಮೀಪಕ್ಕೆ ಬಿದ್ದು ಹಲುಬುತ್ತವೆ.

ಈ ದುರಂತದ ಮೂಲವನ್ನು ಕುರಿತು ಕವಿಯು ಈ ರೀತಿ ಯೋಚಿಸುತ್ತಾನೆ.

ನೀನೇಕೆ ಇಷ್ಟೊಂದು ಗುಣವಿಶೇಷಗಳ ಹೊಂದಿದೆ ?
ವಿಧಿ ಏಕೆ ಇಷ್ಟು ಬೇಗನೆ ನಿನ್ನನ್ನಪಹರಿಸಿತು ?
ಸೃಷ್ಟಿರಹಸ್ಯವನಾರು ಅಳೆಯಬಲ್ಲರು, ಹೇಳು.
ಹಾ ! ಗುಣಿಗಳಿಗೆ ಭೂಮಿಯಲಿ ಬಹುಕಾಲದ ಬಾಳುವೆ ಇಲ್ಲವಲಾ !

ಇಂತಹ ಹಲ ಪ್ರಶ್ನೆಗಳು ಕವಿಯ ಮನದಲ್ಲಿ ಉದ್ಭವಿಸುತ್ತವೆ. ಇವಕ್ಕೆ ಸಮರ್ಪಕವಾದ ಉತ್ತರಗಳು ತೋರದಿದ್ದಾಗ, ಆತನು ಸಮಾಧಾನವನ್ನು ಈರೀತಿ ಚಿಂತಿಸುತ್ತಾನೆ.

ದುಃಖಿಸಿ ನಮಗೆ ಫಲವಿಲ್ಲ. ವಿಪತ್ತುಗಳು
ಭೂಮಿಯಲ್ಲಿ ಕೆಲವುಸಲ ಎಲ್ಲ ಸುಖಗಳನ್ನು ಕೊಲ್ಲುವುವು.
ಅಮರ ಚೈತನ್ಯವೂ ಜಡವೂ ಕಲೆಯೆ ಜಗದೊಳು ಆವಾವುದೋ
ರೂಪಗಳ ಈಶ್ವರನನಂತ ಶಕ್ತಿಯಿಂದ ಪಡೆಯುವುವು.

ಆಶಾನನು ನಿರಾಶಾವಾದಿಯೇ ? ಈ ಕವಿತೆಯು ಅಂತ್ಯವಾಗುವುದು ಹೇಗೆ ? ಅದರಲ್ಲಿ ವೇದಾಂತ ಚಿಂತನೆಯ ಸೂಚನೆ ಇದೆಯೇನು ?

ಓ ರೆಪ್ಪೆಗಳೆ, ಒದ್ದೆಗಣ್ಣುಗಳ ಮುಚ್ಚಿ ! ಈ ಮಲರು ಬಾಡಿ, ಮುದುಡಿ,
ಮಣ್ಣಾಗಿ ಬಿಡುವುದೀ ಕ್ಷಣದಿ.
ಎಲ್ಲರಿಗೂ ಕೊನೆಯ ಗತಿ ಇದುವೆ.
ಇದಕ್ಕೆ ಕಣ್ಣೀರು ಕರೆವುದರಿಂದ ಏನು ಬಪ್ಪುದು ?
ಈ ಜೀವನವೊಂದು ಬರಿಗನಸು ! ಹಾ ಕಷ್ಟ !

ಈ ಇಡೀ ಕವಿತೆಯು ದುಃಖದಲ್ಲಿ ಮುಳುಗಿಸಿದ 'ಭಾವನೆ ಮತ್ತು ಅನುಭವ' ಗಳೆಂಬುದು ನಿಜ. ಈ ಕವಿತೆಯ ಆದಿಯ ಪದ ಮತ್ತು ಅಂತ್ಯದ ಪದ—ಹಾ! ಮತ್ತು ಕಷ್ಟ! ಎಂಬಿವು ಕವಿತೆಯ ವಸ್ತುವು ಶೋಕದಿಂದ ತುಂಬಿರುವುದೆಂಬುದನ್ನು ಒತ್ತಿ ಹೇಳುತ್ತದೆ. ಈ ಶೋಕಗೀತದ ಸನ್ನಿವೇಶದಲ್ಲಿ ಆಶಾನನು 'ಜೀವನವು ಒಂದು ಕನಸಿನಂತೆ' ಎಂಬುದಾಗಿ ಪರಿಗಣಿಸಿರುವುದೂ ನಿಜ. ಆದರೆ ಅವನು ಜೀವನವನ್ನು ಶೂನ್ಯವಾದ ಕನಸಾಗಿ ಪರಿಗಣಿಸುವುದಿಲ್ಲ. ಈ ಕನಸಿಗೆ ಒಂದು ಅರ್ಥವಿದೆ. ಆದರೆ ಇನ್ನು ಬರುವ ಭವಿಷ್ಯದೊಡನೆ ಹೋಲಿಸುವಾಗ ಅದು ಒಂದು ಕನಸು. ಭೌತಿಕ ಅಸ್ತಿತ್ವದಿಂದ ಮಾಯವಾದೊಡನೆ ಹೂವಿನ ಜೀವನವು ಪೂರ್ತಿಯಾಗಿ ಅಂತ್ಯವಾಗುವುದಿಲ್ಲ.

ಪಶ್ಚಿಮಾಬ್ಧಿಯಲಿ ಮೆಲ್ಲನಸ್ತಮಿಸಿದೊಂದು ತಾರೆ ತಿರುಗಿ
ಉದಯಾದ್ರಿಯಲಿ ಬೆಳ್ಳಗೆ ಲಕಲಕಿಸುವಂತೆ
ಸತ್ ಪುಷ್ಪವೇ, ಇಲ್ಲಿಂದ ಮರೆಯಾದ ನೀನು
ಸುಮೇರುವಿನ ಮೇಲೆ ಕಲ್ಪದ್ರುಮದ ಶಾಖೆಯಲಿ ಅರಳಿಬಿಡು.

ಆ ಹೂವಿಗೆ ವೈಭವದ ಭವಿಷ್ಯವನ್ನು ಕವಿಯು ಕಾಣುತ್ತಾನೆ, ಇದರಿಂದಲೇ ಆಶಾನನು ನಿರಾಶಾವಾದಿ ಕವಿಯೆಂಬ ಹೇಳಿಕೆ ಯುಕ್ತವಲ್ಲ.

ಚಿಂತೆಯ ಆಲೋಚನೆ ಕವಿತೆಯಲ್ಲಿ ಬಂತೆಂದಕೂಡಲೇ ನಿರಾಶಾವಾದವನ್ನು ಕವಿಯು ತಂದಿರುವನೆಂದೇ ಹೇಳಲಾಗುವುದಿಲ್ಲ. ನಾವು ಸುಖದುಃಖಗಳೆರಡೂ ಇರುವ ಲೋಕದಲ್ಲಿ ಜೀವಿಸುತ್ತಿದ್ದೇವೆ. ಆದುದರಿಂದ ನಾವು ಅವೆರಡನ್ನೂ ಅಂಗೀಕರಿಸಲೇ ಬೇಕು. ಆದರೆ ಸುಖಕ್ಕಿಂತಲೂ ಹೆಚ್ಚಾಗಿ ದುಃಖವು ವರ್ತಮಾನ ಜೀವನದ ಆಳವಾದ ಅನುಭವಕ್ಕೂ, ಭವಿಷ್ಯ ಜೀವನದೊಡನೆ ಅದರ ಸಂಬಂಧಕ್ಕೂ ದಾರಿಯಾಗುವುದು. 'ಬಿದ್ದ ಹೂವು' ಎಂಬ ಕವಿತೆ ಮತ್ತು ಇತರ ಅನಂತರದ ಕವಿತೆಗಳಿಂದ ವ್ಯಕ್ತವಾಗುವಂತೆ ಆಶಾನನು ಈ ತತ್ವವನ್ನು ಚೆನ್ನಾಗಿ ತಿಳಿದಿದ್ದನು.

ಆಶಾನನ ಪದ್ಯಕೃತಿಗಳಲ್ಲಿ 'ಬಿದ್ದ ಹೂವು' ಪ್ರಮುಖಸ್ಥಾನವನ್ನು ಪಡೆದಿದೆ. ಅದು ಕವಿಯ ಅಪೂರ್ವವಾದ ವ್ಯಕ್ತಿತ್ವವನ್ನು ನಮ್ಮ ಮುಂದೆ ತೆರೆದಿಡುತ್ತದೆ. ಆಮೇಲೆ ಬಂದ ಕವಿತೆಗಳು ಹೆಚ್ಚು ಕಡಿಮೆ ಇದರ ದಾರಿಯನ್ನೇ ಅನುಸರಿಸುತ್ತವೆ. 'ಬಿದ್ದ ಹೂವು' ಬರಿಯ ಹೂವು ಮಾತ್ರವಲ್ಲ. ಪೂರ್ಣ ಜೀವನದ ಸಂಕೇತವೆಂಬುದನ್ನು ನಾವು ನೋಡಿದ್ದೇವೆ. ಈ ಕವಿತೆಯಲ್ಲಿ ಎರಡು ಭಾವಗಳ ಮಿಡಿತವನ್ನು ಕಾಣುತ್ತೇವೆ. ಒಂದು ಶೋಕದ ಭಾವ. ಎರಡನೆಯದು ದುರ್ಬಲವಾದ ಮತ್ತು ಕಷ್ಟಪಡುವ ಪಕ್ಷಕ್ಕೆ ಲಕ್ಷ್ಯವನ್ನು ಹರಿಸುವ ಸ್ವಭಾವ. ಹೂವು ದುರ್ಬಲಪಕ್ಷಕ್ಕೆ ಸೇರಿದೆ. ಆಶಾನನ ಮುಖ್ಯ ಕವಿತೆಗಳಲ್ಲೆಲ್ಲಾ ಈ ಎರಡು ಭಾವಗಳು ಪ್ರಧಾನವಾಗಿವೆ. 'ನಳಿನಿ'ಯಾಗಲಿ, 'ಲೀಲೆ'ಯಾಗಲಿ, 'ಸೀತೆ'ಯಾಗಲಿ, 'ಕರುಣೆ'ಯಾಗಲಿ (ಈ ಕವಿತೆಗಳ ಕುರಿತು ವಿಶದವಾಗಿ ಮುಂದೆ ನಾವು ಪ್ರಸ್ತಾಪಿಸಲಿದ್ದೇವೆ) ಅವೆಲ್ಲವುಗಳಲ್ಲಿಯೂ ಈ ಶೋಕರಸವನ್ನು ನಾವು ನೋಡುತ್ತೇವೆ. ಇಲ್ಲೆಲ್ಲಾ ಪ್ರಧಾನ ಪಾತ್ರ

ಗಳು ಸ್ತ್ರೀ ಪಾತ್ರಗಳೇ. ಅವರೆಲ್ಲಾ ನಮ್ಮ ಮುಂದೆ ಕಾಣಬರುವುದು ತಮ್ಮ ಶೋಚನೀಯ ಸ್ಥಿತಿಯಲ್ಲೇ. ಆಶಾನನು ನಮಗೆ ಅವರ ಕುರಿತು ಹೇಳತೊಡಗುವಾಗ, ಅವರು ಎಂದೋ ಈ ಭೌತಿಕ ಲೋಕವನ್ನು ಬಿಟ್ಟು ಹೋಗುವುದರಲ್ಲಿದ್ದಾರೆ. ಇಲ್ಲವೆ ಅಸ್ಥಿರವಾದ ಈ ಇಂದ್ರಿಯಸುಖಗಳನ್ನು ತ್ಯಜಿಸುವುದರಲ್ಲಿದ್ದಾರೆ. ಕಾವ್ಯವಸ್ತುವನ್ನು ನಮ್ಮ ಮುಂದಿರಿಸುವ ವಿಧಾನವೂ ಒಂದೇ ರೀತಿ ಆಗಿದೆ. ಓದುಗನ ಮನಸ್ಸನ್ನು ಸೆಳೆದುಕೊಳ್ಳುವಂತೆ, ಮುಖ್ಯಪಾತ್ರದ ಜೀವನದ ಪ್ರಧಾನ ನಾಟಕೀಯ ಸಂದರ್ಭ ದಿಂದಲೇ ಕವಿತೆಯು ಆರಂಭವಾಗುವುದು. ಉದಾಹರಣೆಗಾಗಿ,

> ಆ ಹಿಂದಿನ ಮಹಾವಿಭೂತಿ ಸೌಂದರ್ಯಗಳೆಲ್ಲಿ ?
> ಬಾಡಿ ಕೆಳಬಿದ್ದಿರುವ ಈ ನಿನ್ನ ದುರವಸ್ಥೆ ಎಲ್ಲಿ ?

ಆಮೇಲೆ ಹಿಂದಿನ ಕಾಲದ ಚಿಂತನೆಗಳು ಒಂದರ ಮೇಲೊಂದು ಬರುತ್ತವೆ. ತದನಂತರ ವರ್ತಮಾನಕಾಲದ ವಿಷಾದ ಪರಿಸ್ಥಿತಿಯತ್ತ ಗಮನ ಹರಿಸಿ, ಅಲ್ಲಿ ನಿಲ್ಲದೆ ಆಶಾದಾಯಕವೂ ಸಮಾಧಾನಕರವೂ ಆದ ಬೆಳಕಿನ ಭವಿಷ್ಯವನ್ನು ಕವಿಯು ತೋರಿಸುತ್ತಾನೆ. ಇದು ಎಲ್ಲಾ ಕವಿತೆಗಳ ಸ್ಥೂಲವಾದ ಚೌಕಟ್ಟಿನ ಮಾದರಿ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಆಶಾನನು ಬರೆದಿರುವ ಎಲ್ಲಾ ಪ್ರಧಾನ ಕವಿತೆಗಳಲ್ಲಿಯೂ 'ಬಿದ್ದ ಹೂ'ವಿನ ಪುನರಾವೃತ್ತಿಯನ್ನೇ ನಾವು ನೋಡುತ್ತೇವೆ. ಅಲ್ಲಿನ ಸಾಂಕೇತಿಕ ನಿರೂಪಣೆ ಬೇರೆ ಹೆಸರುಗಳನ್ನೂ ಸಂಭವಗಳನ್ನೂ ಒಳಗೊಂಡಂತೆ ಇವೆ. ನಳಿನಿ, ಲೀಲಾ, ಸೀತೆ, ಮತ್ತು ವಾಸವದತ್ತೆಯರ ಪಾತ್ರಗಳು 'ಬಿದ್ದ ಹೂವಿ'ನ ಸ್ಥಾನವನ್ನು ಆಕ್ರಮಿಸುತ್ತವೆ. ಪ್ರರೋದನವೆಂಬ ಸಹಜವಾದ ಶೋಕಗೀತೆ ಹೆಸರಾಂತ ಕವಿಯೂ ವಿದ್ವಾಂಸನೂ ಆದ ಎ. ಆರ್. ರಾಜರಾಜವರ್ಮನು ದಿವಂಗತ ನಾದ ಸಂದರ್ಭದಲ್ಲಿ ಬರೆದ ಕವಿತೆ.

ಹೀಗೆ ಕುಮಾರನ್ ಆಶಾನನ ಕವಿ ಹೃದಯ 'ಬಿದ್ದಹೂವಿ'ನಲ್ಲಿ ಎದ್ದು ತೋರುತ್ತದೆ. ಆತನ ಜೀವನ ತತ್ವದ ನಿರೂಪಣೆ ಅತ್ಯುತ್ತಮವಾಗಿ ಕಂಡುಬರುವುದು ಆ ಕವಿತೆಯಲ್ಲಿಯೇ. ದುಃಖದ ದುರಂತದ ಸಂಭವಗಳ ನಡುವೆ ಆಶಾನನು ಆಶಾವಾದಿ ಯಾಗಿ, ಶ್ರದ್ಧೆ ಪ್ರೇಮಗಳ ನಿಷ್ಠೆಯುಳ್ಳವನಾಗಿ ತೋರಿಬರುತ್ತಾನೆ. ಆತನ ಅನಿಸಿಕೆಯಂತೆ ಹೂವು ಸಂಪೂರ್ಣ ನಷ್ಟವಾಗಿ ಹೋಗಲಿಲ್ಲ. ಅದು ಹೆಚ್ಚಿನ ವೈಭವದ ಹೊಸಜೀವನಕ್ಕೆ ಬದಲಾವಣೆ ಹೊಂದುತ್ತದೆ.

# 7. ಪ್ರೇಮ ಗೀತಗಳು

## ನಳಿನಿ

ಹಿಂದಿನ ಅಧ್ಯಾಯದಲ್ಲಿ 'ಬಿದ್ದ ಹೂವು' ಎಂಬ ಕವಿತೆಯಲ್ಲಿ ಸಾಂಕೇತಿಕ ಪಾತ್ರ ಇರುವುದನ್ನೂ ಆಮೇಲಿನ ಕವಿತೆಗಳಲ್ಲಿ ಸಾಂಕೇತಿಕ ಉಡುಗೆಯನ್ನು ಕಳಚಿಹಾಕಿರುವುದನ್ನೂ ಪ್ರಸ್ತಾಪಿಸಿದ್ದೇವೆ. ಸಾಂಕೇತಿಕ ಚೌಕಟ್ಟನ್ನು ಬಿಟ್ಟು ಕೊಡುವುದರಲ್ಲಿಯೂ ಒಂದು ನಡುವಣ ಘಟ್ಟ ತೋರಿಬರುತ್ತದೆ. ಇದು ಅನಂತರದ ಪ್ರಮುಖವಾದ 1911 ರಲ್ಲಿ ಪ್ರಕಟವಾದ ನಳಿನಿ ಎಂಬ ಕವಿತೆಯನ್ನು ಪರಿಶೀಲಿಸುವಾಗ ತಿಳಿದುಬರುವುದು. 'ಬಿದ್ದ ಹೂವು' ಈ ಸಂದರ್ಭದಲ್ಲಿ ಈ ಕವಿತೆಯ ನಾಯಕಿಯಾದ ನಳಿನಿ. ನಳಿನಿ ಎಂಬ ಹೆಸರು ಈಗ ಹುಡುಗಿಯರಲ್ಲಿ ಹೆಚ್ಚು ಬಳಕೆಯಲ್ಲಿದೆ. ಆದರೆ ಆಶಾನನು ಈ ಕವಿತೆಯನ್ನು ಬರೆದಾಗ ಕೇರಳದಲ್ಲಿ ಈ ಹೆಸರು ಅಷ್ಟು ಪ್ರಚಾರದಲ್ಲಿರಲಿಲ್ಲ. ನಳಿನಿ ಎಂಬುದರ ಶಬ್ದಾರ್ಥ ತಾವರೆ ಹೂಗಳ ಗುಂಪು (ಮತ್ತು ತಾವರೆ ಕೊಳ) ಎಂದು. ಈ ಶಬ್ದವು ತಾವರೆ ಎಂಬರ್ಥವುಳ್ಳ ನಳಿನಂ ಎಂಬ ಶಬ್ದದಿಂದ ಬಂದಿದೆ. ಈ ಕವಿತೆಯ ನಾಯಕಿಗೆ ಯಾವ ಹೆಸರನ್ನೂ ಕೊಟ್ಟಿರಬಹುದಿತ್ತು ಎಂದು ನಮಗೆ ತೋರಬಹುದು. ಆದರೆ ಸೂಕ್ಷ್ಮವಾಗಿ ಪರಿಶೀಲಿಸುವಾಗ ಮೇಲಿನ ಹೆಸರೇ ಸರಿ ಎಂದು ಮನವರಿಕೆಯಾಗುತ್ತದೆ. ಆಶಾನನು ಈ ಕವಿತೆಯ ನಾಯಕಿಗೆ ಉದ್ದೇಶಪೂರ್ವಕವಾಗಿಯೇ ಈ ಹೆಸರನ್ನು ಕೊಟ್ಟಿದ್ದಾನೆ. ಬೇರೆ ಯಾವ ಹೆಸರೂ ಇದರಷ್ಟು ಔಚಿತ್ಯಪೂರ್ಣವಾಗಿರಲು ಸಾಧ್ಯವಿಲ್ಲ. 'ಬಿದ್ದ ಹೂವಿ'ನಲ್ಲಿ ತೋರುವ ಹೂವನ್ನು ಕಮಲಕ್ಕೆ ಸೀಮಿತಗೊಳಿಸಲು ಸಾಧ್ಯವಿದೆ. ಇಷ್ಟು ಮಾತ್ರವಲ್ಲ. ನಳಿನಿ ಎಂಬ ಕವಿತೆಯಲ್ಲಿ ಬರುವ ನಾಯಕನ ಹೆಸರನ್ನೂ ಬೇರೆ ಬದಲಾಯಿಸಲು ಸಾಧ್ಯವೇ ಇಲ್ಲ. ಇಲ್ಲಿಯ ನಾಯಕನ ಹೆಸರು ಸೂರ್ಯನೆಂದು ಅರ್ಥ ಬರುವ 'ದಿವಾಕರ' ಎಂದು.

ಭಾರತೀಯ ಕವಿಸಮಯದ ಪರಿಚಯವಿದ್ದವರಿಗೆ ಕಮಲಕ್ಕೂ ಸೂರ್ಯನಿಗೂ ಇರುವ ಸಂಬಂಧ ಚೆನ್ನಾಗಿ ತಿಳಿದೇ ಇದೆ. ಸಾಮಾನ್ಯವೆಂದು ತೋರಿಬರುವ ದಿವಾಕರನ್ ಮತ್ತು ನಳಿನಿ ಎಂಬ ಹೆಸರುಗಳುಳ್ಳ ಆ ಪಾತ್ರಗಳಿಗೆ ಮಾನವ ಸ್ವರೂಪವನ್ನು ಕೊಡುತ್ತ, ಇದು ಈ ಕವಿತೆಯಲ್ಲಿ ಸಾಂಕೇತಿಕ ರೀತಿಯನ್ನಿಟ್ಟುಕೊಳ್ಳಲು, ಶೃಂಗಾರರಸದ ಮಟ್ಟವನ್ನು ಹೆಚ್ಚಿಸಲು ಸಹಾಯವಾಗುತ್ತದೆ. ಸೂರ್ಯನು ನಲ್ಲ, ಕಮಲವು ನಲ್ಲೆ. ಈ ಸಂಪ್ರದಾಯದ ಅಚ್ಚಿನಲ್ಲಿ ಆಶಾನನು ಶೃಂಗಾರದ ಎಂತಹ ಎರಕವನ್ನು ಹೊಯ್ದಿರುವನು ಎಂಬುದನ್ನೀಗ ನೋಡುವ.

ಆಶಾನನನ್ನು ಸಾಮಾನ್ಯವಾಗಿ 'ಸ್ನೇಹಗಾಯಕ' ಅಥವಾ ಪ್ರೇಮದ ಹಾಡುಕವಿ ಎಂದು ಎಲ್ಲರೂ ಸಂಬೋಧಿಸುತ್ತಾರೆ. ಸ್ತ್ರೀಯನ್ನು ಕೇಂದ್ರವಾಗಿಟ್ಟು ಕೊಂಡು ರಚಿಸಿದ ಪ್ರೇಮದ ವಿವಿಧ ಮುಖಗಳ ಪರಿಶೀಲನೆಯು ಅವನ ಎಲ್ಲಾ ಮುಖ್ಯ ಕವಿತೆಗಳಲ್ಲಿಯೂ ಕಂಡುಬರುತ್ತದೆ. ಆದರ್ಶ ಪ್ರೇಮದತ್ತ ಆಶಾನನ ಒಲವಿದ್ದಂತೆ ತಿಳಿಯುವುದು. ಕವಿತೆಯು ಕಥೆಯು ಮುಂದರಿದಂತೆಲ್ಲಾ ಈ ಶೃಂಗಾರ ರಸವು ಪರಿಶುದ್ಧವಾಗುವುದು, ಉದಾತ್ತವಾಗುವುದು. ಅಂದಿನ ಕಾಲದಲ್ಲಿ ಕೇರಳದ ಕಾವ್ಯಸಂಸ್ಕೃತಿಯಲ್ಲಿ ಇದೊಂದು ಮಹತ್ತರವಾದ ಬದಲಾವಣೆ. ಅಂದಿನ ಕಾಲದಲ್ಲಿ ಕವಿತೆಯು ಸಂಪ್ರದಾಯಬದ್ಧ ಮಹಾಕಾವ್ಯದ ರೂಪ ಮತ್ತು ಲೌಕಿಕವಾದ ಶೃಂಗಾರರೂಪಗಳೆರಡರ ಮಧ್ಯದಲ್ಲಿ ತೂಗಾಡುತ್ತಿತ್ತು. ಸಾಮಾನ್ಯಕವಿಗೆ ಶೃಂಗಾರವು ಒಂದು ವ್ಯಾಮೋಹವಾಗಿತ್ತು, ಅತಿಮಾನುಷ ವರ್ಣನೆಗಳತ್ತ ಒಲವು ಮತ್ತು ಮಹಾಕಾವ್ಯಗಳ ಬಾಹ್ಯರೂಪದಲ್ಲಿ ಸಂಪ್ರದಾಯಬದ್ಧವಾದ ಅನುಸರಣೆ, ಇವು ಕವಿತಾರಚನೆಯ ಮೂಲಸೂತ್ರಗಳಾಗಿದ್ದುವು. ರೊಮ್ಯಾಂಟಿಕ್ ಕವಿತೆಯ ಗುಣವಾದ ಸಾಹಸಪ್ರವೃತ್ತಿ ಮತ್ತು ಸ್ವಚ್ಛಂದ ಕಲ್ಪನಾವಿಲಾಸಗಳು ಮಲಯಾಳ ಪದ್ಯ ಸಾಹಿತ್ಯಕ್ಕೆ ಇನ್ನೂ ಬಂದಿರಲಿಲ್ಲ. ಆಂಗ್ಲ ರೊಮ್ಯಾಂಟಿಕ್ ಕವಿತೆಯಿಂದ ಪ್ರಭಾವಿತನಾಗಿದ್ದ ಕುಮಾರನ್ ಆಶಾನನು ಮಲಯಾಳ ಪದ್ಯ ಸಾಹಿತ್ಯದಲ್ಲಿ ಅಡಿ ಇಟ್ಟುದು ಇಂತಹ ಸಂದರ್ಭದಲ್ಲಿ. 'ವೀಣ ಪೂವು' (ಬಿದ್ದ ಹೂವು) ಮಲಯಾಳ ಪದ್ಯಸಾಹಿತ್ಯ ಮಂದಿರದ ಬಾಗಿಲುಗಳನ್ನು ಆತನಿಗೆ ತೆರೆಯಿತು ಮಾತ್ರ. ಆ ಮಂದಿರದ ಜಗಲಿಗಳಲ್ಲಿಯೂ, ಪ್ರಾಕಾರಗಳಲ್ಲಿಯೂ ಮೇಲುಜಾತಿಯ ಕವಿಗಳು ತಮ್ಮ ಸಂಪ್ರದಾಯ ಬದ್ಧ ಶೃಂಗಾರ ಕವಿತೆಗಳೊಡನೆ ಅತ್ತಿತ್ತ ನಡೆಯುತ್ತಿರುವುದನ್ನು ಆತನು ನೋಡಿದನು. ಆದರೆ ಅವರೊಡನೆ ಸೇರದೆ ಆತನು ನೇರವಾಗಿ ತನ್ನ ಎರಡನೆಯ ಕವಿತೆಯಾದ 'ನಳಿನಿ' ಎಂಬ ಕೃತಿಯೊಡನೆ ಗರ್ಭಗುಡಿಯತ್ತ ಧಾವಿಸಿದನು. ಇದನ್ನು ನೋಡಿ ಕೆಲವರು ಅಚ್ಚರಿಗೊಂಡರು. ಕೆಲವರ ಮುಖದಲ್ಲಿ ಪ್ರಶ್ನಾರ್ಥಕ ಚಿಹ್ನೆಯಿತ್ತು. ಆದರೆ ನಡೆದಿದ್ದುದನ್ನು ತಿಳಿದವರು ಕೆಲವರೇ ಮಾತ್ರ. ಅದು ರೊಮ್ಯಾಂಟಿಕ್ ಕವಿತೆಯ ಕ್ರಾಂತಿ.

ಸಹಜವಾದ ರೊಮ್ಯಾಂಟಿಕ್ ರೀತಿಯಲ್ಲಿ, ಮಾನವ ಜೀವನದ ಮಾನಸಿಕ ಭಾವಗಳತ್ತ ಆಶಾನನು ಹೆಚ್ಚಾಗಿ ಮನಹರಿಸಿದ್ದರೂ, ಅವನ ಕವಿತೆಯು ಸಂಪ್ರದಾಯ ದೃಷ್ಟಿಯನ್ನು ಸಂಪೂರ್ಣವಾಗಿ ಬಿಟ್ಟಿರಲಿಲ್ಲ. ಅವನ ಕವಿತೆಯಲ್ಲಿ ರೊಮ್ಯಾಂಟಿಕ್ ಭಾವ ಮತ್ತು ಸಾಂಪ್ರದಾಯಿಕ ಭಾವಗಳು ಸಮರಸವಾಗಿ ಮಿಳಿತವಾಗಿದ್ದುವು. ಇದರಿಂದಾಗಿಯೇ ಆತನು ಆ ಕವಿತಾಮಂದಿರದಿಂದ ಹೊರದೂಡಲ್ಪಡಲಿಲ್ಲ. ನಳಿನಿ ಎಂಬುದಕ್ಕೆ 'ಒರು ಸ್ನೇಹಂ' (ಒಂದು ಪ್ರಣಯ) ಎಂಬ ಉಪನಾಮವಿರುವುದೂ ಗಣನಾರ್ಹವಾಗಿದೆ. ಕವಿಗೆ ಕವಿತೆಯಲ್ಲಿ ಹೆಚ್ಚಿನ ಒಲವು ಇದೆಯೆಂದು ಆತನ ಮುನ್ನುಡಿಯೂ ಸೂಚಿಸುತ್ತದೆ. ಆತನು ಆ ಕವಿತೆಯನ್ನು 1909 ರಲ್ಲಿ ಆರಂಭಿಸಿದನು. ಆದರೆ ಅದು ಹಸ್ತಪ್ರತಿಯ ಮಟ್ಟದಲ್ಲಿಯೇ ನಿದ್ರಿಸುತ್ತಿತ್ತು. ಆ ಕವಿತೆಯಲ್ಲಿ ಹೆಚ್ಚಿನ ಆಸಕ್ತಿ ಇದ್ದುದರಿಂದ ಆತನು ಅದನ್ನು 1911 ರಲ್ಲಿ ಸಂತೋಷದಿಂದ ಪ್ರಕಟಿಸಿದನು.

ಅದರಲ್ಲಿ ಕವಿಯ ಜೀವನಚರಿತ್ರೆಯ ಕೆಲವಂಶಗಳು ಹುದುಗಿರುವುವೆಂದೂ, ಆತನು ಅದನ್ನು ಮೆಚ್ಚಲು ಇದು ಕಾರಣವಾಗಿರಬಹುದೆಂದೂ ವಿಮರ್ಶಕರು ಹೇಳುತ್ತಾರೆ. ಈ ಕವಿತಾರಚನೆಯ ಕಾಲದಲ್ಲಿ ಮೂವತ್ತಾರುವರ್ಷ ವಯಸ್ಸಿನವನಾಗಿ ನಿಷ್ಠಾವಂತ ಬ್ರಹ್ಮಚಾರಿಯಾಗಿದ್ದ ಚಿನ್ನಸ್ವಾಮಿಯ ಚಿತ್ತವೃತ್ತಿಯನ್ನು ದಿವಾಕರನ ಮನೋಭಾವವು ಪ್ರತಿಬಿಂಬಿಸುವಂತೆ ಕಾಣುತ್ತದೆ.

## ನಳಿನಿಯ ಕತೆ

ದಿವಾಕರ ಮತ್ತು ನಳಿನಿ ಚಿಕ್ಕಂದಿನಿಂದಲೇ ನೆರೆಹೊರೆಯವರೂ ಸ್ನೇಹಿತರೂ ಆಗಿದ್ದರು. ಅವರು ಒಟ್ಟಿಗೇ ಕಲಿತರು. ಆಡಿದರು. ಒಂದೇ ವಾತಾವರಣದಲ್ಲಿ ಬೆಳೆದರು. ಅವರು ಪ್ರಾಯಕ್ಕೆ ಬಂದಾಗ, ದಿವಾಕರನು ಮನೆಯನ್ನು ಬಿಟ್ಟು ಒಬ್ಬ ಸನ್ಯಾಸಿಯಾದನು. ನಳಿನಿಗೆ ಇದು ತಿಳಿದಾಗ ದುಃಖವಾಯಿತು. ಕಾಲಕಳೆದಂತೆ ಅವಳ ದುಃಖ ಹೆಚ್ಚುತ್ತ ಹೋಯಿತು. ನಳಿನಿಯ ತಾಯ್ತಂದೆಯರು ಅವಳನ್ನು ಸಾಂತ್ವನಗೊಳಿಸಲು ಪ್ರಯತ್ನಿಸಿ ವಿಫಲರಾದರು. ಆಕೆಗೆ ಪ್ರಾಯಬಂದಾಗ ತಾಯ್ತಂದೆಯರು ಆಕೆಯ ಮದುವೆ ನಿಶ್ಚೈಸಿದರು.

ಇದು ಆಕೆಯ ದುಃಖವನ್ನು ಮತ್ತಷ್ಟು ಹೆಚ್ಚಿಸಿತು. ಮುಂದಿನ ದಾರಿಯೇನನ್ನೂ ಕಾಣದೆ ಆತ್ಮಹತ್ಯೆಗಾಗಿ ಆಕೆಯು ನಿರ್ಧರಿಸಿದಳು. ಮಧ್ಯರಾತ್ರಿಯಲ್ಲಿ ಮನೆಯಿಂದ ಹೊರಗೆ ಓಡಿ ಕಾಡನ್ನು ಪ್ರವೇಶಿಸಿ ಅಲ್ಲಿಯ ಕೊಳವೊಂದರಲ್ಲಿ ಹಾರಿದಳು. ಇದನ್ನು ನೋಡಿದ ಒಬ್ಬ ಸನ್ಯಾಸಿನಿಯು ಆಕೆಯನ್ನು ರಕ್ಷಿಸಿ ತನ್ನ ಆಶ್ರಮಕ್ಕೆ ಕರೆದುಕೊಂಡು ಹೋದಳು. ಅಲ್ಲಿ ಆ ಸನ್ಯಾಸಿನಿಯು ನಳಿನಿಗೆ ಯೋಗಾಭ್ಯಾಸವನ್ನು ಕಲಿಸಿದಳು.

ಈ ರೀತಿ ಐದು ವರ್ಷಗಳು ಕಳೆದುವು. ಹೀಗಿರುವಾಗ ಒಮ್ಮೆ ಅಕಸ್ಮಾತ್ತಾಗಿ ಅದೇ ಕಾಡಿನಲ್ಲಿ ದಿವಾಕರನು ಕಾಣಿಸಿಕೊಂಡನು. ಒಂದು ದಿನ ನಳಿನಿಯೂ ದಿವಾಕರನೂ ಅಲ್ಲಿ ಸಂಧಿಸಿದರು. ಕವನವು ಆರಂಭವಾಗುವುದು ಈ ನಾಟಕೀಯ ಸಂದರ್ಭದಲ್ಲಿ. ಹಿಮಾಲಯ ಪ್ರಾಂತದಲ್ಲಿ ನಡೆಯುವ, ಸಹಜವಾದ ಪ್ರಣಯ ಮತ್ತು ತ್ಯಾಗಗಳ ನಡುವಣ ಆಧ್ಯಾತ್ಮಿಕ ಒಳತೋಟಿಗೆ ಎಡೆಕೊಡುವ ಈ ದೃಶ್ಯವು ಸ್ಪಷ್ಟವಾಗಿ ಚಿತ್ರಿತವಾಗಿದ್ದು ಪಾತ್ರ ಪರಿಚಯವನ್ನು ಮಾಡಲಾಗಿದೆ.

ಕವಿಯು ವರ್ಣಿಸುವಂತೆ ನಳಿನಿಗೆ ಉಷಃ ಕಾಲದ ಸ್ವರ್ಗಲ್ಯ ಸೌಂದರ್ಯಗಳಿವೆ. ಆಕೆಯು ಕೊಳದಲ್ಲಿ ಸ್ನಾನಮಾಡಿ ಇನ್ನೂ ಒದ್ದೆಯಾಗಿರುವ ಬಟ್ಟೆಯಲ್ಲಿ ಧ್ಯಾನಾಸಕ್ತಳಾಗುವ ಸಿದ್ಧತೆಯಲ್ಲಿದ್ದಾಳೆ. ದಿವಾಕರನು ಹತ್ತಿರವೇ ಇದ್ದಾನೆ. ಆದರೆ ಅವರಿಬ್ಬರ ನಡುವೆ ಮರವೊಂದು ಇದ್ದುದರಿಂದ ಅವರು ಒಬ್ಬರನ್ನೊಬ್ಬರು ನೋಡಿರುವುದಿಲ್ಲ. ಆದಾಗ್ಯೂ ಇಬ್ಬರೂ ಒಂದುತರದ ಕಾತರತೆಯನ್ನು ಅನುಭವಿಸುತ್ತಾರೆ. ಅಂತರ್ದೃಷ್ಟಿಯ ಅನಿಸಿಕೆಯ ಕಿಡಿ ಅದರಲ್ಲಿರುವುದನ್ನು ಕಂಡುಕೊಳ್ಳಲು ಕವಿಯು ಶಕ್ತನಾಗಿದ್ದಾನೆ. ತುಸುಸಮಯದ ಮೇಲೆ ಒಬ್ಬರನ್ನೊಬ್ಬರು ನೋಡುತ್ತಾರೆ. ದಿವಾಕರನು ಆಕೆಯನ್ನು ಮರಗಳ ನಡುವಣ ಚಂದ್ರನ ಏಕಮಾತ್ರ ಕಿರಣದಂತೆ ಕಾಣುತ್ತಾನೆ. ಆದರೆ ಆತನು ನಿರಾಸಕ್ತ. ಆಕೆಯನ್ನು ಆತನು ಗುರುತಿಸುವುದಿಲ್ಲ.

ನಳಿನಿಯ ಪರಿಸ್ಥಿತಿ ಹೀಗಲ್ಲ. ಒಂದುಕ್ಷಣದಲ್ಲಿಯೇ ಆಕೆಯು ಆತನನ್ನು ಗುರುತಿಸುತ್ತಾಳೆ.

ತಮ್ಮ ಪ್ರಣಯಿಗಳನ್ನು ಕಂಡುಹಿಡಿಯುವುದರಲ್ಲಿ ಹೆಂಗಸರಿಗೆ ವಿಚಕ್ಷಣತೆ ಹೆಚ್ಚು. ಆಕೆಯು ಕ್ಷಣಕಾಲ ಸುಮ್ಮನಿರುತ್ತಾಳೆ. ಆಮೇಲೆ ತನ್ನನ್ನು ನಿಯಂತ್ರಿಸಿಕೊಳ್ಳಲು ಆಕೆಗೆ ಸಾಧ್ಯವಾಗುವುದಿಲ್ಲ.

ಬೆಚ್ಚಿ, ಮನದಿ ಗಲಿಬಿಲಿಗೊಂಡು
ನಿಂತಳೊಂದು ಚಣ.
ಮರುಚಣವೆ ಧಾವಿಸಿದಳು ಯೋಗಿಯೆಡೆ—
ಅಣೆಕಟ್ಟೊಡೆದಾಗ ನೀರು
ಸಮುದ್ರದೆಡೆ ಧುಮ್ಮಿಕ್ಕುವಂತೆ.

ಆಕೆಯು ಮುಂದೆ ಆಲೋಚನೆಯನ್ನೇ ಮಾಡದೆ ಯೋಗಿಯ ಪಾದಗಳ ಮೇಲೆ ಬೀಳುವಳು. ಹರಡಿಕೊಂಡ ತನ್ನ ತಲೆಕೂದಲು ಆತನ ಪಾದಗಳನ್ನು ಸ್ಪರ್ಶಿಸಿದಾಗ ಹೆಚ್ಚಿನ ತೃಪ್ತಿಯನ್ನು ಆಕೆ ಅನುಭವಿಸುವಳು.

ಆದರೆ ಯೋಗಿಯು ಇದರಿಂದ ದಂಗುಬಡಿದು ನಿಂತನು. ಆತನು ಆಕೆಯನ್ನು ಗುರುತಿಸದಿದ್ದುದರಿಂದ ಈ ಕೃತ್ಯವು ಆತನ ಮನಸ್ಸಿನಲ್ಲಿ ಗೊಂದಲವನ್ನೆಬ್ಬಿಸುವುದು. ಆದರೆ ಯೋಗಿಗೆ ಸಹಜವಾದ ಮನೋನಿಗ್ರಹವನ್ನು ಆತನು ತೋರಿಸುವನು. ಯಾವ ತರದ ಉದ್ವೇಗಕ್ಕೂ ಆತನು ಗುರಿಯಾಗುವುದಿಲ್ಲ.

ನಳಿನಿಯು ತಮ್ಮ ಹಿಂದಣ ಸಂಬಂಧವನ್ನು ಆತನಿಗೆ ನೆನಪಿಸುವಳು. ತಾನು ಹೇಗೆ ವ್ಯಾಮೋಹದಿಂದ ಆತನನ್ನು ಆರಾಧಿಸುತ್ತಿರುವೆನೆಂದು ಆತನಿಗೆ ತಿಳಿಸುವಳು.

'ಸನ್ಯಾಸಿನಿಯಾಗಿದ್ದಾಗಲೂ
ನನ್ನ ತಪಸ್ಸು ನಿನ್ನನ್ನೇ ಕುರಿತು ನಡೆದಿತ್ತು.
ನಿನ್ನನು ಕಂಡು ನನ್ನ ಆಶೆಗಳೆಲ್ಲ ಪೂರೈಸಿದವು
ನೀನೆನ್ನ ನೆನಪಿನಲ್ಲಿಟ್ಟುಕೊಂಡಿದ್ದರೂ ಸರಿ, ಇಲ್ಲದಿದ್ದರೂ ಸರಿ.'

ದಿವಾಕರನು ಆಕೆಯ ಅವಸ್ಥೆಯನ್ನು ನೋಡಿ ಕನಿಕರಪಡುವನು. ಆದರೆ ತಾನು ಮುಂದರಿದಿದ್ದ ದಾರಿಯಿಂದ ಹಿಂದೆ ಬರಲಾರನು. ಆತನು ತನ್ನ ನಿರ್ಧಾರದಲ್ಲಿ ಸ್ಥಿರಮನಸ್ಕನಾಗಿದ್ದು ಐಹಿಕ ಪ್ರಣಯದ ಅರ್ಥಶೂನ್ಯತೆಯನ್ನು ಆಕೆಗೆ ಮನವರಿಕೆ ಮಾಡಲು ಪ್ರಯತ್ನಪಡುವನು.

'ಈ ಕಾಡಿನಲಿ ಮಹಾನುಭಾವೆಯಾದ ಹಿರಿಯ
ಯೋಗಿನಿಯ ಜತೆ ದೊರೆತ ನೀ ಭಾಗ್ಯವಂತೆ.
ನಾನಿನ್ನು ಹೋಗುವೆನು ನಿನಗೆ ದೊರೆಯಲಿ ಶಾಂತಿ
ಶುಭೇ ! ವಿಧಿಯೋಗವು ಕೂಡಿಬಂದರೆ ಇನ್ನೊಮ್ಮೆ ಕಾಣುವ.'

ನಳಿನಿಯು ಎದೆಯೊಳಗೆ ಸುಪ್ತವಾಗಿದ್ದ ಪ್ರೇಮ ಒಮ್ಮೆಲೇ ಪ್ರಜ್ವಲಿಸುವುದು.

ನೀನೇ ಎನ್ನ ಸಕಲ ಸಂಪದವು
ನೀನೆನ್ನ ಜೀವನವೆನ್ನ ಸಂತೋಷ ಮೋಕ್ಷ ಎಲ್ಲ ;
ಈ ಪದಾಂಬುಜವೆನ್ನ ನಿಲುಗಡೆಯು, ದೊರೆಯೆ !
ಇವು ಇಲ್ಲದಿರೆ ನಾನು ಸತ್ತ ಹಾಗೆ.

ದಿವಾಕರನು ಆಕೆಯನ್ನು ಹಾಗೆಯೇ ಬಿಟ್ಟುಹೋಗಲಾರನು. ಮನೋವೇಧಕವಾದ ಒಳತೋಟಿಯು ಆತನಲ್ಲಿ ಉಂಟಾಗುವುದು. ತನ್ನೆಲ್ಲ ವಿಶಾಲ ಅನುಭವದ ಶಕ್ತಿಯಿಂದ ಆಕೆಗೆ ಬುದ್ಧಿ ಹೇಳುವನು.

ಪಾವನಾಂಗಿ ! ಯಾರೂ ಮನದುಂಬಿ ಹಾರೈಸಬಹುದು
ನಿನ್ನೀ ಗಭೀರ ಸ್ನೇಹವನು.
ಅಸ್ಥಿರ ವಸ್ತುಗಳಿಗದನು ಅರ್ಪಿಸದಿರು—
ಶವದ ಮೇಲಿನ ಹೂಗಳಂತೆ.
ಭೂಲೋಕದೆಲ್ಲದರ ಸಾರವೆಂದರೆ ಪ್ರೇಮ
ಪ್ರೇಮಸಾರವದೊಂದೆ ನಿತ್ಯ ಸತ್ಯ.
ಅದರ ದೆಸೆಯಿಂದಲೇ ತೊರೆದಿಹೆನು
ಈ ಮೋಹಕ ಜಗದ ಸಕಲ ಸಂಬಂಧಗಳನು.

ಕೊನೆಯದಾಗಿ ನಳಿನಿಯು ತನ್ನ ಜೀವನದಲ್ಲಿ ಬಹು ದೊಡ್ಡ ಬದಲಾವಣೆಯನ್ನು ಹೊಂದುವಳು. ಈ ಭೌತಿಕ ಹೊರೆಯನ್ನು ಹೊತ್ತು ಮುಂದರಿಯಲು ಆಕೆಯು ಮನಮಾಡಲಿಲ್ಲ. ಕಮಲವು ಕೊನೆಗೆ ಸೂರ್ಯನಿಗೆ ಅರ್ಪಿತವಾಯಿತು. ಜೀವನದಲ್ಲಿ ತಾನು ಸಾಧಿಸಲಾಗದಿದ್ದುದನ್ನು ಮರಣದಲ್ಲಿ ಆಕೆಯು ಸಾಧಿಸಿದಳು. ದಿವಾಕರನ ಶರೀರವನ್ನು ಆಲಿಂಗಿಸುವಾಗಲೇ ಆಕೆಯ ಜೀವವು ಹಾರಿಹೋಗಿತ್ತು. ಈ ಅಪೂರ್ವವಾದ ಸೇರುವೆಯು ಬಣ್ಣನೆ ಕವಿಯ ಮಾತಿನಲ್ಲಿ ಹೀಗೆ ಬಂದಿದೆ.

"ಪ್ರಶಾಂತವೀಚಿಯೊಡನೆ ಸೇರುವಿನ್ನೊಂದು ವೀಚಿಯಂತೆ,
ಮಧುರನಾದದೊಡನೆ ಸಮರಸಗೊಳುವ ಇನ್ನೊಂದು ನಾದದಂತೆ,
ಹೊಳೆವ ಕಿರಣವು ಇನ್ನುಳಿದ ಕಿರಣಗಳನೊಡಗೂಡುವಂತೆ,
ಅವರ ದೇಹಗಳು ಒಂದಾದುವು."

ಪರಮಾನಂದದ ಆ ಕ್ಷಣದಲ್ಲಿ ಈ ಕನ್ನೆ ಭೌತಿಕ ಜೀವನಕ್ಕತೀತಳಾಗಿ, ತನ್ನ ಪ್ರಿಯಕರನನ್ನೂ ವಿರಿಸಿದಳು.

ಕೆಲವರಿಗೆ 'ನಳಿನಿ'ಯು ಒಂದು ದುರಂತವೆಂದೂ ಈ ಕಥಾನಾಯಕಿಯ ಪ್ರೇಮ ವಿಫಲವಾಯಿತೆಂದೂ ತೋರಬಹುದು. ಆದರೆ ಇದು ಪ್ರೇಮದ ಸ್ವಭಾವ, ಅದರ ಗುರಿಯ ಬಗ್ಗೆ ಇರುವ ವಿಮರ್ಶಕನ ಅಭಿಪ್ರಾಯವನ್ನು ಹೊಂದಿಕೊಂಡಿರುತ್ತದೆ. ದೈಹಿಕ ಸಂಭೋಗ ಇಂದ್ರಿಯ ಸುಖಗಳು ಪ್ರೇಮದ ಗುರಿಯಾಗಿದ್ದರೆ,

ನಳಿನಿಯ ಅಂತ್ಯವು ಒಂದು ದುರಂತ. ಪ್ರೇಮದ ಗುರಿಯು ಭೌತಿಕ ಸುಖವನ್ನು ಮೀರಿದ ಆನಂದವಾಗಿದ್ದಲ್ಲಿ ಈ ಕವಿತೆಯಲ್ಲಿ ಅದು ಸಿದ್ಧಿಸಿರುವುದನ್ನು ಕಾಣಬಹುದು. ಉದಾತ್ತಪ್ರೇಮದ ಪಾಶ್ಚಾತ್ಯಭಾವನೆಯನ್ನು ಶೃಂಗಾರದ ಬಗ್ಗೆ ಸಂಸ್ಕೃತ ಕವಿಗಳ ಅಭಿಪ್ರಾಯದೊಡನೆ ಆಶಾನನು ಸೇರಿಸಿ ಈ ಕವಿತೆಯನ್ನು ರಚಿಸಿರುವನು. ಶೃಂಗಾರ ವನ್ನು ಸಂಭೋಗ ಶೃಂಗಾರ, ವಿಪ್ರಲಂಭ ಶೃಂಗಾರಗಳೆಂದು ಎರಡು ವಿಧವಾಗಿ ಸಂಸ್ಕೃತ ಅಲಂಕಾರಿಕರು ವಿಭಜಿಸಿರುವರು. ವಿಪ್ರಲಂಭ ಶೃಂಗಾರದಲ್ಲಿ ಕೆಳಗಿನ ಹತ್ತು ಘಟ್ಟಗಳಿವೆ.

1. ಚಕ್ಷುಃ ಪ್ರೀತಿ —ನೋಟದಿಂದ ಪ್ರೇಮ
2. ಮನಸ್ಸಂಗಮ —ಮಾನಸಿಕ ಸಂಭೋಗ
3. ಸಂಕಲ್ಪ —ಮನೋನಿಶ್ಚಯ
4. ಜಾಗರ —ನಿದ್ರಾರಾಹಿತ್ಯ
5. ಕಾರ್ಶ್ಯ —ಕೃಶತೆ
6. ವಿಷಯ ವೈಮುಖ್ಯ —ಇತರ ವಿಷಯಗಳಲ್ಲಿ ಅನಾಸಕ್ತಿ
7. ಲಜ್ಜಾನಾಶ —ಲಜ್ಜೆಯನ್ನು ಕಳೆದುಕೊಳ್ಳುವುದು
8. ಉನ್ಮಾದ —ಹುಚ್ಚು
9. ಮೂರ್ಛೆ —ಪ್ರಜ್ಞಾರಾಹಿತ್ಯ
10. ಮರಣ —ಸಾವು

ವಿಪ್ರಲಂಭವು ಯಾವ ಘಟ್ಟದಲ್ಲಿಯೂ ಸಂಭೋಗಕ್ಕೆ ಮಾರ್ಪಡಬಹುದು. ನಳಿನಿಯು ಈ ಎಲ್ಲಾ ಘಟ್ಟಗಳನ್ನು ದಾಟಿ ಹೋಗಿರುವಂತೆ ತೋರುವುದು. ಈ ಕವಿತೆಯಲ್ಲಿ ಆಕೆಯು ಕಾಣಿಸಿಕೊಳ್ಳುವುದು ತನ್ನ ಪ್ರಿಯನನ್ನು ಸಂಧಿಸಲಿಕ್ಕಿರುವಾಗ. ಆಗ ಆಕೆಯು ಏಳನೇ ಘಟ್ಟದಲ್ಲಿರುತ್ತಾಳೆ. ಆಕೆಯು ಆತನೊಡನೆ ತನ್ನ ಪ್ರೇಮವನ್ನು ಬಹಿರಂಗವಾಗಿ ಹೇಳಿಕೊಳ್ಳಲು ನಾಚುವುದಿಲ್ಲ. ಆ ನಲ್ಲನಲ್ಲೆಯರ ಸಂಭಾಷಣೆಯಿಂದ ವಿಪ್ರಲಂಭ ಶೃಂಗಾರದ ಇತರ ಘಟ್ಟಗಳು ನಮ್ಮ ಮುಂದೆ ಮಿಂಚಿದಂತಾಗುತ್ತವೆ. ಕೊನೆಯ ಮೂರು ಘಟ್ಟಗಳು ನಮ್ಮೆದಿರಲ್ಲಿಯೇ ಸಂಭವಿಸುತ್ತವೆ. ಕೊನೆಯದಾದ ಮರಣವು ಎರಡು ವಿಧಗಳಲ್ಲಿ, ಒಂದೋ ಸಂಪೂರ್ಣ ನಿರಾಶೆಯಿಂದ ಅಥವಾ ಸಂಭೋಗದಿಂದ ಉಂಟಾಗಬಹುದು. ನಳಿನಿಯಲ್ಲಿ ಈ ಮರಣವು ಪ್ರಾಪ್ತವಾಗುವುದು ಮೊದಲನೆಯ ಕಾರಣದಿಂದ. ಜನಸಾಮಾನ್ಯರಿಗೆ ಇದೊಂದು ಬೌದ್ಧಿಕ ಕಸರತ್ತಾಗಿ ಕಾಣಬಹುದು. ಆದರೆ ಆಶಾನನು ' ನಳಿನಿ 'ಯಲ್ಲಿ ' ಆ ಪ್ರೇಮ 'ವನ್ನು ಸಾಮಾನ್ಯರಿಗೆ ನಿಲುಕದ ಆ ಎತ್ತರದಲ್ಲಿಟ್ಟಿದ್ದಾನೆ.

ಆಶಾನನು ಅನುಭವಿಸಿದ್ದ ಮಾನಸಿಕ ಒಳತೋಟಿಯ ಆವಿಷ್ಕಾರವೂ ನಳಿನಿ ಯಲ್ಲಿದೆ ಎನ್ನಬಹುದು. ಒಬ್ಬ ಗಟ್ಟಿಮುಟ್ಟಾದ ಆರೋಗ್ಯವಂತ ಯುವಕನ ಪ್ರಕೃತಿ ಸಹಜವಾದ ಆಕರ್ಷಣೆಗಳನ್ನು ಆತನೂ ಅನುಭವಿಸಿರಬೇಕೆಂದು ನಾವು ಊಹಿಸಿ ಕೊಳ್ಳಬಹುದು. ಆತನು ಸಮಾಜದಲ್ಲಿ ಕ್ರಿಯಾಶಾಲಿ ಸದಸ್ಯನಾಗಿದ್ದ. ನಾನಾ ವಿಧದ

ಸ್ತ್ರೀಪುರುಷರ ಜೊತೆಯಲ್ಲಿದ್ದು ಆತನು ತನ್ನ ಕೆಲಸವನ್ನು ನಿರ್ವಹಿಸಬೇಕಾಗಿತ್ತು. ಸಹಜವಾಗಿಯೇ ಪ್ರೇಮದ ವಿವಿಧ ಮುಖಗಳನ್ನು ಆತನು ಕಂಡು ಅನುಭವಿಸಿರಬೇಕು. ಅದೇ ಸಮಯದಲ್ಲಿ ಗುರುವಿನ ಪ್ರಭಾವದಿಂದ ತನ್ನಲ್ಲಿದ್ದ ಆಧ್ಯಾತ್ಮಿಕ ಒಲವನ್ನು ಬಿಟ್ಟುಕೊಡುವುದೂ ಕಷ್ಟಕಾರ್ಯವಾಗಿತ್ತು. ಈ ಒಳತೋಟಿಯು ಆತನ ರೊಮ್ಯಾಂಟಿಕ್ ಕವಿತೆಯಾದ ನಳಿನಿಯಲ್ಲಿ ಕಾಣಿಸಿಕೊಂಡಿದೆ.

## ಲೀಲಾ

ತಾನು ಚಿತ್ರಿಸಲು ಬಯಸಿದ್ದ ಪ್ರೇಮದ ಪೂರ್ಣಚಿತ್ರಣವು 'ನಳಿನಿ'ಯಲ್ಲಿ ಬರಲಿಲ್ಲವೆಂದು ಆಶಾನನಿಗೆ ತೋರಿತು. ಆದುದರಿಂದ ಆತನು 'ಲೀಲಾ' ಎಂಬ ಇನ್ನೊಂದು ಕವಿತೆಯನ್ನು ಬರೆದನು. ಇದನ್ನು ಆತನು 'ನಳಿನಿ'ಯನ್ನು ಪ್ರಕಟಿಸಿದ ಮೂರು ವರ್ಷಗಳ ಮೇಲೆ ಎಂದರೆ 1914 ರಲ್ಲಿ ಪ್ರಕಟಿಸಿದನು. ಹೀಗಿದ್ದರೂ ಆತನು 'ನಳಿನಿ'ಯನ್ನು ಬರೆದು ಮುಗಿಸುವ ಮೊದಲೇ 'ಲೀಲಾ' ಎಂಬ ಕವಿತೆಯ ಭಾವವು ಆತನ ಮನದಲ್ಲಿ ಮೂಡಿತ್ತು. ಇದು ಆತನು ಲೀಲಾ ಎಂಬ ಕವಿತೆಗೆ ಬರೆದ ಮುನ್ನುಡಿಯಲ್ಲಿ ಬಂದಿರುವ ಆತನ ಈ ಹೇಳಿಕೆಯಿಂದ ತಿಳಿದುಬರುವುದು :

"ನಳಿನಿಯನ್ನು ಬರೆದು ಮುಗಿಸುವ ಮೊದಲೇ, ಅಂತಹ ರೀತಿಯ ಇನ್ನೊಂದು ಚಿಕ್ಕ ಕವಿತೆಯನ್ನು ರಚಿಸುವ ಅವಶ್ಯಕತೆಯು ನನಗೆ ಕಂಡುಬಂತು. ಅದಕ್ಕೆ ಕಾರಣ ಇದು: ನಳಿನಿ ಎಂಬ ಕವಿತೆಯ ನಾಯಕನಾಯಕಿಯರು ರಾಜಸ ರಹಿತರಾದ ಸಾತ್ವಿಕ ಪೂರ್ಣರಾದ ವ್ಯಕ್ತಿಗಳು. ಲೌಕಿಕ ಜೀವನವು ಸಾತ್ವಿಕಕ್ಕಿಂತ ಮೊದಲಿನ ಘಟ್ಟಗಳಲ್ಲಿ ಹೆಚ್ಚು ಪ್ರತಿಬಿಂಬಿತವಾಗುತ್ತದೆ. ಆದುದರಿಂದ ಅದು ಜೀವನದ ದುಃಖಗಳನ್ನೂ ರಹಸ್ಯಗಳನ್ನೂ ಇನ್ನೂ ಚೆನ್ನಾಗಿ ಚಿತ್ರಿಸಬಲ್ಲುದು."

ಪ್ರೇಮದ ಮುಖ್ಯ ಅನುಭವದ ಕುರಿತು ತಾನು ಹೇಳಬಯಸಿದುದನ್ನೆಲ್ಲಾ 'ನಳಿನಿ'ಯಲ್ಲಿ ಹೇಳಲು ಸಾಧ್ಯವಾಗಿಲ್ಲವೆಂದು ಇಲ್ಲಿ ಕವಿಯು ಸ್ಪಷ್ಟವಾಗಿ ಒಪ್ಪಿಕೊಂಡಿರುವನು. ನಳಿನಿಯ ಸಾತ್ವಿಕ ಭಾವವನ್ನು ಐಹಿಕ ರಾಗಾದಿಗಳಿಂದ ಕಲುಷಿತವನ್ನಾಗಿ ಮಾಡಲು ಆತನ ಮನಸ್ಸು ಒಪ್ಪಲಿಲ್ಲ. ಆ ಎರಡು ಕವಿತೆಗಳ ಸ್ವರೂಪವನ್ನು ಔಚಿತ್ಯಪೂರ್ಣವಾದ ಒಂದು ಉಪಮೆಯ ಮೂಲಕ ಕವಿಯು ನಿರೂಪಿಸಿರುತ್ತಾನೆ.

'ನಳಿನಿಯು ಹಿತವಾದ ಪರಿಮಳವೂ ಶಾಂತವಾದ ಬಣ್ಣವೂ ಇರುವ ಒಂದು ತಾವರೆ. ಲೀಲೆಯು ತೀಕ್ಷ್ಣವಾದ ವಾಸನೆಯೂ ಪ್ರಕಾಶಮಾನವಾದ ಬಣ್ಣವೂ ಉಳ್ಳ ಒಂದು ಚಂಪಕ.' ಒಂದು ಎದೆಯನ್ನು ಕರಗಿಸುವುದಿದ್ದರೆ ಮತ್ತೊಂದು ಮನಸ್ಸನ್ನು ಉದ್ರೇಕಿಸಿ ಅಶಾಂತಿಯನ್ನುಂಟುಮಾಡುತ್ತದೆ. ನಳಿನಿಯಲ್ಲಿನ ಸರಳವಾದ ಕತೆ ಆಶಾನನ ಸ್ವಂತ ಸೃಷ್ಟಿ. ಲೀಲೆಯ ಕತೆ ನಿಸಾಮಿಯು ಪರ್ಶಿಯನ್ ಭಾಷೆಯಲ್ಲಿ ರಚಿಸಿದ ಸುಪ್ರಸಿದ್ಧ ಕೃತಿಯಾದ ಲೈಲಾಮಜ್ನುವಿನಿಂದ ಆಯ್ದುಕೊಂಡದ್ದು. ಸೆಂಟ್ರಲ್ ಹಿಂದೂ ಕಾಲೇಜಿನ ಸಂಚಿಕೆಯಲ್ಲಿ ಪ್ರಕಟವಾದ ಡಾ. ಆನಂದ ಕುಮಾರ ಸ್ವಾಮಿಯವರ ಲೇಖನದಿಂದ ಈ ಪರ್ಶಿಯನ್ ಕತೆಯ ಕುರಿತು ಆಶಾನನಿಗೆ ತಿಳಿದು ಬಂತು. ಮೂಲವನ್ನೇ ನೋಡಲು ಆತನಿಗೆ ಸಾಧ್ಯವಾಗಲಿಲ್ಲ. ಈ ಕತೆಯ ಚೌಕಟ್ಟನ್ನೇ

ತನ್ನ ಮನದಲ್ಲಿ ಆತನು ಚಿಂತಿಸಿದನು. ಪ್ರೇಮದ ರಾಜಸಮುಖದ ಕುರಿತು ತನ್ನ ಅನುಭವ ಅಭಿಪ್ರಾಯಗಳನ್ನು ಎರಕ ಹೊಯ್ಯಲು ಇದೊಂದು ಅನುಕೂಲವಾದ ಅಚ್ಚೆಂಬುದನ್ನು ಆತನು ಕಂಡುಕೊಂಡನು.

ಆಶಾನನ ಈ ಕತೆಯು ನಡೆಯುವುದು ಉತ್ತರಭಾರತದ ಉದಯಪುರದ ಸಮೀಪವಿರುವ ಒಂದು ಸ್ಥಳದಲ್ಲಿ. ಲೀಲೆಯು ಅರ್ಥಪಾಲಕನೆಂಬ ಒಬ್ಬ ಶ್ರೀಮಂತ ವ್ಯಾಪಾರಿಯ ಮಗಳು. ವ್ಯಾಪಾರಸಂಬಂಧವಾದ ತನ್ನ ಪ್ರವಾಸವೊಂದರಲ್ಲಿ ತಾನು ಕಂಡ ಇನ್ನೊಬ್ಬ ಶ್ರೀಮಂತ ವ್ಯಾಪಾರಿಯ ಮಗನೊಡನೆ ತನ್ನ ಮಗಳ ವಿವಾಹವನ್ನು ಆತನು ನಿಶ್ಚಯಿಸಿದನು. ಆದರೆ ಲೀಲೆಯು ತನ್ನ ಬಾಲ್ಯಸ್ನೇಹಿತನಾದ ಮದನನಿಗೆ ತನ್ನ ಹೃದಯವನ್ನು ಹಿಂದೆಯೇ ಅರ್ಪಿಸಿದ್ದಳು. ಆದರೂ ಗೂಡಿನಲ್ಲಿ ಸಿಕ್ಕಿಬಿದ್ದಿದ್ದ ಹಕ್ಕಿಯನ್ನು ಕೊಟ್ಟುಬಿಡುವಂತೆ ಆಕೆಯ ಮದುವೆಯಾಯಿತು. ತಾನು ತನ್ನ ಗಂಡನೊಡನೆ ಜೀವಿಸುತ್ತಿದ್ದರೂ, ಮದನನಿಂದ ತನ್ನ ಮನಸ್ಸನ್ನು ಕೀಳಲು ಆಕೆಗೆ ಸಾಧ್ಯವಾಗಲಿಲ್ಲ. ಆತನ ಮೇಲಣ ಆಕೆಯ ಪ್ರೇಮ ಅಷ್ಟು ರೂಢಮೂಲವಾಗಿತ್ತು. ಬಹುಶಃ ಈ ನೀರಸಜೀವನವನ್ನು ಮುಂದರಿಸಲಾರದಂತೆಯೋ ಏನೋ ಆಕೆಯ ಗಂಡನು ಸ್ವಲ್ಪ ಸಮಯದಲ್ಲಿಯೇ ಮೃತಿಹೊಂದಿದನು. ಹೀಗೆ ಈ ಬಂಧನವು ತುಂಡಾದೊಡನೆಯೇ ಲೀಲೆಯು ತನ್ನ ತವರುಮನೆಗೆ ಧಾವಿಸುತ್ತಾಳೆ. ಆದರೆ ಅಷ್ಟರೊಳಗೆ ಮದನನು ಪ್ರೇಮಭಂಗದಿಂದ ನಿರಾಶೆಗೊಂಡು ವಿಂಧ್ಯದ ಕಾಡುಗಳತ್ತ ನಡೆದಿದ್ದನು. ಆಕೆಯ ತಾಯ್ತಂದೆಗಳು ಇಷ್ಟರಲ್ಲಿಯೇ ತೀರಿಕೊಂಡಿದ್ದರು. ಲೀಲೆಯು ತನ್ನ ಸಖಿಯೊಡನೆ ತಾನೂ ಕಾಡಿಗೆ ಹೋಗುವಳು. ಅಲ್ಲಿ ಸುಮಾರು ಸುತ್ತಾಡಿದ ಮೇಲೆ ಕೊನೆಗೆ ಅವರು ಮದನನನ್ನು ಸಂಧಿಸುವರು. ಆದರೆ ಈ ಸಮಯದಲ್ಲಿ ಮದನನು ಉನ್ಮಾದಾವಸ್ಥೆಯನ್ನು ಮುಟ್ಟಿದ್ದನು. ಅನಿರೀಕ್ಷಿತವಾದ ಈ ತನ್ನ ಪ್ರಿಯೆಯ ಸಮಾಗಮವು ಭಾವೋದ್ವೇಗದ ತುತ್ತತುದಿಗೆ ಆತನನ್ನು ಕೊಂಡು ಹೋಗಲು ಸಾಕಾಗಿತ್ತು. ಅವನು ಉದ್ವೇಗಭರದಲ್ಲಿ ರೇವಾನದಿಗೆ ಧುಮುಕುವನು. ಲೀಲೆಯೂ ಅದೇ ನದಿಯ ತಳವನ್ನಲ್ಲದೆ ಬೇರೆ ಯಾವ ಆಶ್ರಯವನ್ನು ಕಾಣಬಲ್ಲಳು ? ಲೀಲೆಗೂ ಅದೇ ನದಿಯು ಆಶ್ರಯವನ್ನು ಕೊಟ್ಟಿತು.

'ನಳಿನಿ' ಯಂತೆ 'ಲೀಲೆ' ಯೂ ವಿವರಣಾತ್ಮಕವಾದ ಕವಿತೆಯಲ್ಲ. ಅದು ಮೂರು ದೃಶ್ಯಗಳಿರುವ ಒಂದು ಏಕಾಂಕ ನಾಟಕದಂತಿದೆ. ಈ ಕವಿತೆಯು ಮೂರು ಸರ್ಗಗಳನ್ನೊಳಕೊಂಡಿದೆ. ಮೊದಲನೆಯ ಸರ್ಗದ ಮೊದಲ ಪದ್ಯವು ಸಂಭಾಷಣೆಯ ರೂಪದಲ್ಲಿದೆ. ಇದರಲ್ಲಿ ಸಖಿಯಾದ ಮಾಧವಿಯು ಪ್ರಜ್ಞಾಶೂನ್ಯಳಾದ ನಾಯಕಿಯನ್ನು ಎಬ್ಬಿಸಲು ಪ್ರಯತ್ನಿಸುವಳು

'ಪ್ರಣಯ ಪರವಶೇ ! ನಿನಗೆ ಶುಭವಾಗಲಿ. ಎದ್ದೇಳು.
ನಿನ್ನ ಪ್ರಿಯನು ದೊರೆತಿಹನು.
ಗುಣವತಿ ! ದೀರ್ಘ ಮೋಹನಿದ್ರೆಯನ್ನು ಬಿಟ್ಟು ಎದ್ದೇಳು.
ನಾನು ನಿನ್ನ ಸಖಿ ಮಾಧವಿ'

ಕವಿತೆಯು ಈ ರೀತಿ ಒಂದು ನಾಟಕೀಯ ಸಂದರ್ಭದಿಂದ ಆರಂಭವಾಗುತ್ತದೆ. ಅದುವರೆಗಿನ ಕತೆಯು ಸಂಭಾಷಣೆ, ನಿರೂಪಣೆಗಳ ಮೂಲಕ ಸ್ಪಷ್ಟವಾಗುತ್ತದೆ.

ಲೀಲೆಗೆ ಮದನನ ಮೇಲಿದ್ದ ಪ್ರೇಮದ ಆಳ ಮತ್ತು ಆವೇಗ ಎರಡನೆಯ ಸರ್ಗದಲ್ಲಿ ವ್ಯಕ್ತವಾಗುತ್ತದೆ. ಲೀಲಾ ಮಾಧವಿಯರ ತಿರುಗಾಟವೂ ಅವರು ಮದನನನ್ನು ಸಂಧಿಸುವುದೂ ಮೂರನೆಯ ಸರ್ಗದಲ್ಲಿ ಬರುವುದು. ಆಕೆಯು ಮದನನನ್ನು ಸಂಧಿಸುವ ಮೊದಲೇ ಆತನು ಅಲ್ಲಿ ಹತ್ತಿರದಲ್ಲಿಯೇ ಇರುವನೆಂದು ಆಕೆಗೆ ಅನುಭವವಾಗುವುದು. ಚಂಪಕಪುಷ್ಪಗಳ ವಾಸನೆಯು ಅದಕ್ಕೆ ಒಂದು ಸೂಚನೆಯಂತಿದೆ. ಆಶಾನನ ಪಾತ್ರಗಳಿಗೆ ಒಳಲೋಕಕ್ಕೆ, ಮನೋಲೋಕದ ಉಪಪ್ರಜ್ಞೆಯ ಮಟ್ಟಕ್ಕೆ ಮೆಲ್ಲನೆ ಮುದುಡಿ ಬಾಹ್ಯೇಂದ್ರಿಯವಾದ ಕಣ್ಣಿಗೆ ಕಾಣದ ವಿಷಯಗಳನ್ನು ಕಂಡುಕೊಳ್ಳುವ ಶಕ್ತಿ ಇದೆ. ಮದನನು ಈಗ ರಕ್ತಮಾಂಸಗಳಿರುವ ಹಿಂದಿನ ಸುಂದರ ತರುಣನಲ್ಲ. ಆತನೀಗ ಬರೀ ಎಲುಬುಗೂಡಾಗಿದ್ದಾನೆ. ಲೀಲೆಯು ಆತನನ್ನು ಆಲಿಂಗಿಸುತ್ತಾಳೆ. ಆತನೂ ಅನಿರ್ವಚನೀಯವಾದ ಆನಂದವನ್ನು ಅನುಭವಿಸುತ್ತಾನೆ. ಈ ಜತೆಯು ನಳಿನಿದಿವಾಕರರಿಗಿಂತ ವಿಶಿಷ್ಟ ರೀತಿಯಲ್ಲಿ ಭಿನ್ನವಾಗಿದೆ.

ಬಳಲಿ ಬೆಂಡಾಗಿ, ಎಲುಬು ಹಂದರವಾಗಿ, ಪ್ರಜ್ಞೆ ಇಲ್ಲದ ಸ್ಥಿತಿಯೊಳಿದ್ದರೂ
ಎವೆಯಿಕ್ಕದೆ ಅವಳೆಡೆಗೆ ನೋಡಿದನು ತತ್ಪರತೆಯಲಿ.
ಪ್ರೇಮ ದೈಹಿಕ ಬಂಧನಕೆ ಒಳಗಲ್ಲವೆಂದೂ !
ಬರಡುಮರವನು ಸುತ್ತಿಕೊಂಡ ಚೆಲುವಿನ ಬಳ್ಳಿಯೊಲು
ಅಪ್ಪಿಕೊಂಡಳು ಅವನನಾಕೆ ;
ಬಳಲಿದವನನು ಆಕೆ ಮೆಲ್ಲ ನುಯ್ದಡವಿ ' ಪ್ರಿಯನೇ '
ಎಂದು ಗದ್ಗದ ಕಂಠದಿಂದ ಕಂಬನಿಯನುಕ್ಕಿಸಿದಳು.

ಆಶಾನನ ಹೆಚ್ಚಿನ ಕವಿತೆಗಳಂತೆಯೇ 'ಲೀಲೆ'ಯೂ ಸಿದ್ಧಿಯನ್ನು ಪಡೆಯದ ಪ್ರೇಮದ ಚಿತ್ರಣವಿರುವ ಕವಿತೆ. ಇಲ್ಲಿ ಎಲ್ಲಾ ಬಾಗಿಲುಗಳೂ ಮುಚ್ಚಿದಂತೆ ತೋರುತ್ತವೆ. ಆ ಮಾನಸಿಕ ಒಳತೋಟಿಯು 'ಲೀಲೆ'ಯಲ್ಲಿ ಒಂದು ಸುಂದರ ಪದ್ಯದಿಂದ ವರ್ಣಿತವಾಗಿದೆ.

ಇಹದಲ್ಲಿ ನೆನೆಸಿದುದನೆಲ್ಲ ಮುಗಿಸಲಾರೆವು ನಾವು
ಮನವು ಲಭಿಸಿದುದರಲ್ಲೀ ತೃಪ್ತಿಗೊಳದು.
ಈಶ್ವರನ ಇಚ್ಛೆಯೇನಿದೆಯೊ ನಾವರಿಯೆವು
ಈ ಬಾಳೊ ನಶ್ವರವು ; ತುಚ್ಛ ಮಾನವನ ಸ್ಥಿತಿಯು !

ಲೀಲೆಯು ಅನುಭವಿಸಿದ ಈ ನಿರಾಶೆಯು ಕವಿಯ ಮನವನ್ನು ಆತನ ಜೀವನದ ಕಷ್ಟಕಾಲಗಳಲ್ಲಿ ಹಲವಾ ಕಾಡಿರಬೇಕು. ಪ್ರೇಮವು ಅದುಮಿಡಲಾಗದ ರಾಗೋದ್ರೇಕವೆಂಬುದನ್ನು ಆತನು ತಿಳಿದಿದ್ದನು. ಅದು ಎಷ್ಟು ಕೆಳಗೆ ಅದುಮಲ್ಪಡುವುದೋ ಅದಕ್ಕಿಂತ ಹೆಚ್ಚಿನ ಎತ್ತರಕ್ಕೆ ಅದು ಮೇಲೆ ನೆಗೆಯುತ್ತದೆ. ಆಶಾನನು

ಯಾವ ಪರಿಸರದಲ್ಲಿ ಜೀವಿಸುತ್ತಿದ್ದನೋ ಅಲ್ಲಿ ಪ್ರಣಯದ ಉದಾತ್ತೀಕರಣವೆಂಬುದು ಏನೆಂದೇ ತಿಳಿದಿರಲಿಲ್ಲ. ಆದುದರಿಂದ ಸ್ತ್ರೀಪುರುಷರ ಪ್ರಣಯದ ಆಶ್ಚರ್ಯಕರವಾದ ಶಕ್ತಿಯನ್ನು ಉದಾತ್ತಗೊಳಿಸುವುದು ಹೇಗೆಂಬುದನ್ನೂ ಪ್ರಣಯ ಭಾವವಿಲ್ಲದೆ ನಿಜವಾದ ಪ್ರೇಮವಾಗಿ ಅದನ್ನು ಪರಿಶುದ್ಧಗೊಳಿಸುವುದು ಹೇಗೆಂಬುದನ್ನೂ ಸಮಾಜಕ್ಕೆ ತಿಳಿಸುವುದು ಅವಶ್ಯವಿತ್ತು. ವೈಭವಪೂರ್ವವೂ ಅತ್ಯಂತ ಕಠಿಣವೂ ಆದ ಈ ಅಂಶವನ್ನು 'ನಳಿನಿ'ಯಲ್ಲಿ ಕಾಣುತ್ತೇವೆ. ಈ ಮಟ್ಟಕ್ಕಿಂತ ಕೆಳಗಿನ, ಆದರೆ ಜನಸಾಮಾನ್ಯರಿಗೆ ಸಹಜವಾದ, ಪ್ರಣಯದ ಭಾವವನ್ನು 'ಲೀಲಾ' ವಿಶದೀಕರಿಸುತ್ತದೆ. ಆದರೆ ಕವಿಪ್ರತಿಭೆಯ ಅಭಿವ್ಯಕ್ತಿಯು ಲೀಲೆಯಲ್ಲಿ ಹೆಚ್ಚು ಪ್ರಕಾಶಯುತವಾಗಿ ಬೆಳಗಿದೆ. ಈ ಎರಡು ಕವಿತೆಗಳಿಂದ ಮಲಯಾಳ ಸಾಹಿತ್ಯವಿಮರ್ಶಕರು ಆತನಿಗಿತ್ತ 'ಸ್ನೇಹಗಾಯಕ' (ಪ್ರೇಮಕವಿ) ಎನ್ನುವ ಹೆಸರು ಅನ್ವರ್ಥವಾಗಿದೆ.

ನಳಿನಿಯಂತೆ ಲೀಲೆಯೂ ಕೂಡ ಒಂದು ಬಿದ್ದಹೂವು. ಆದರೆ ಐಹಿಕ ಜೀವನದ ಅಂತ್ಯವು ಹೆಚ್ಚು ವೈಭವಯುತವಾದ ಇನ್ನೊಂದು ಜೀವನದ ಆದಿ. ಕುಮಾರನ್ ಆಶಾನನಿಗೆ ಆತ್ಮನ ಅಮೃತತ್ವದಲ್ಲಿ ನಂಬಿಕೆ ಇತ್ತು. ಆತನ ತತ್ವವು ಕೆಳಗಿನ ವಾಕ್ಯಗಳಲ್ಲಿ ನಿರೂಪಿಸಿದ ಹ್ಯಾರಿ ಎಮರ್‌ಸನ್ ಫೋಸ್‌ಡಿಕ್‌ನ ಜೀವನ ತತ್ವಕ್ಕೆ ಹೊಂದಿಕೊಂಡಿದೆ: 'ನನಗೆ ಅಮೃತತ್ವದಲ್ಲಿ ದೃಢವಾದ ನಂಬಿಕೆ ಇದೆ. ಅದಕ್ಕೆ ನಾನು ವೈಯಕ್ತಿಕವಾಗಿ ಹಾತೊರೆಯುತ್ತೇನೆ ಎನ್ನುವ ಕಾರಣಕ್ಕಾಗಿ ಈ ನಂಬಿಕೆಯಲ್ಲ. ಈ ನಂಬಿಕೆ ಇಲ್ಲದಿದ್ದರೆ ಮಾನವ ಕುಲವೇ ನಿರಾಶೆಯ ಪರಿಸ್ಥಿತಿಯಲ್ಲಿ ಬೀಳುವುದೆಂದೂ, ಜೀವನತತ್ವವು ನಿರಾಶಾವಾದದ ಉಪದೇಶವಾಗಿ ಪರಿಣಮಿಸುವುದೆಂದೂ ನನಗೆ ತೋರುವುದು.'

ಈ ಆಕಸ್ಮಾತ್ತಾದ, ಹೃದಯಭೇದಕವಾದ ಅಗಲಿಕೆಯನ್ನು ತಡೆಯಲಾರದೆ ಸಖಿ ಮಾಧವಿಯು ಅತ್ತು ಅತ್ತು ಕೊನೆಗೆ ಮಗುವಿನಂತೆ ನಿದ್ರಿಸಿಬಿಡುವಳು. ಆಗ ಮೋಹಕ ಸೌಂದರ್ಯವಿರುವ ಸುರದಂಪತಿಗಳು ಅವಳನ್ನು ಎಬ್ಬಿಸಿ ಸಾಂತ್ವನಗೊಳಿಸುವರು.

# 8. ಮನೆಗಾಗಿ ಹಂಬಲ

ಎಸ್. ಎನ್. ಡಿ. ಪಿ. ಯೋಗದ ವ್ಯವಸ್ಥೆಯ ಮತ್ತು ಆಡಳಿತದ ಪ್ರಧಾನ ಜವಾಬ್ದಾರಿಯನ್ನು ಕುಮಾರನ್ ಆಶಾನನು ವಹಿಸಿಕೊಂಡಂದಿನಿಂದ (1902) ಆತನು ತನ್ನ ಸಮಾಜದ ಆಧ್ಯಾತ್ಮಿಕ ಮತ್ತು ಸಾಮಾಜಿಕ ಆಕಾಂಕ್ಷೆಗಳನ್ನು ಪ್ರಚೋದಿಸುವುದರಲ್ಲಿಯೂ, ಅವುಗಳಿಗೆ ಮಾರ್ಗದರ್ಶನ ಮಾಡುವಲ್ಲಿಯೂ ಮಗ್ನ

ನಾಗಿದ್ದನು. ತನ್ನ ಆಧ್ಯಾತ್ಮಿಕ ಜೀವನವನ್ನು ರೂಪಿಸಿದ ತನ್ನ ಗುರುವಿನ ಮಾರ್ಗ ದರ್ಶನವನ್ನು ಆತನು ಯಾವಾಗಲೂ ಪಡೆಯುತ್ತಿದ್ದನು. ಆದರೆ ಆಶಾನನಿಗೆ ತನ್ನದೇ ಆದ ಶಕ್ತಿಯುತ ವ್ಯಕ್ತಿತ್ವವಿತ್ತು. ಅದನ್ನು ಇನ್ನೊಂದು ವ್ಯಕ್ತಿತ್ವವು—ಅದು ಎಷ್ಟೇ ಶಕ್ತಿಯುತವಾಗಲಿ—ತಾನು ಇಚ್ಛಿಸಿದ ರೂಪಕ್ಕೆ ತರಲು ಸಾಧ್ಯವಿರಲಿಲ್ಲ. ತಾನು ಕುಟುಂಬಜೀವನವನ್ನು ನಡೆಸಬೇಕೆನ್ನುವುದರ ಕಡೆಗೆ ಆಶಾನನು ಅಷ್ಟು ಲಕ್ಷ್ಯ ಕೊಟ್ಟಿರಲಿಲ್ಲವೆನ್ನುವುದು ನಿಜ. ತನಗೆ ನಲ್ವತ್ತೈದು ವರ್ಷ ವಯಸ್ಸಾಗುವವರೆಗೂ ಆತನು ಮದುವೆಯ ವಿಷಯ ಹೆಚ್ಚು ಗಮನಕೊಡದಿದ್ದುದಕ್ಕೆ ಇದೂ ಒಂದು ಕಾರಣ. ಆತನು ಬ್ರಹ್ಮಚಾರಿಯಾಗಿಯೇ ಜೀವನವನ್ನು ಮುಂದುವರಿಸುವನೆಂಬುದು ಜನರ ಸಾಮಾನ್ಯ ನಂಬಿಕೆಯಾಗಿತ್ತು. ಚಿನ್ನಸ್ವಾಮಿ ಎಂಬ ಆತನ ಉಪನಾಮವೂ ಈ ನಂಬಿಕೆಗೆ ಪೋಷಕವಾಗಿತ್ತು. ಆದರೆ ಆಶಾನನ ಮನಸ್ಸು ಯೋಚಿಸಿದ ರೀತಿ ಯನ್ನು ಸರಿಯಾಗಿ ತಿಳಿದವರು ಬಹು ಸ್ವಲ್ಪ. ತನ್ನ ವೈಯಕ್ತಿಕ ಮನೋವಿಚಾರದ ಕುರಿತು ಆತನು ಇತರರಿಗೆ ಹೆಚ್ಚು ತಿಳಿಯಗೊಡುತ್ತಿರಲಿಲ್ಲ. ತನ್ನ ಸ್ವಂತ ದಿನಚರಿ ಯನ್ನು ಬರೆಯುತ್ತಿದ್ದಾಗಲೂ ಈ ಒಂದು ವಿಷಯದಲ್ಲಿ ಮಾತ್ರ ಆತನು ಮೌನ ವಾಗಿಯೇ ಇದ್ದನು. ಒಂದು ಬಗೆಯ ಅನಾಸಕ್ತಿಯನ್ನು ಆತನು ಬೆಳೆಸಿಕೊಂಡಿದ್ದುದು ಸ್ವಲ್ಪಮಟ್ಟಿಗೆ ನಿಜ. ಆತನ ತಾಯಿಯು 1911 ರಲ್ಲಿ ಮೃತಳಾದಳು. ಕೆಲ ದಿನಗಳ ಮೇಲೆ ದುಃಖವನ್ನು ವ್ಯಕ್ತಗೊಳಿಸುವ ಕೆಲವು ಶೋಕಗೀತೆಗಳನ್ನು ಆತನು ರಚಿಸಿ ದರೂ ಆಕೆ ತೀರಿಕೊಂಡ ಸಮಯದಲ್ಲಿ ತನ್ನ ದುಃಖವನ್ನು ತೋಡಿಕೊಳ್ಳುತ್ತ ಆತನು ಅಲ್ಲಿಗೆ ಧಾವಿಸಲಿಲ್ಲ. ತನ್ನ ಬಂಧುಬಾಂಧವರ ಕುರಿತಾಗಿಯೂ ಆಶಾನನ ವರ್ತನೆ ನಿರ್ಲಕ್ಷ್ಯದಿಂದ ಕೂಡಿದುದಾಗಿ ತೋರುತ್ತಿತ್ತು. ಈ ಅನಾಸಕ್ತಿ ಸ್ವಾಮಿಗೆ ಯೋಗ್ಯ ವಾಗಿತ್ತೆಂಬುದು ನಿಜ.

ಬ್ರಹ್ಮಚರ್ಯ ಮತ್ತು ಗೃಹಸ್ಥಾಶ್ರಮಗಳ ನಡುವೆ ಆಶಾನನ ಮನಸ್ಸಿನಲ್ಲಿ ಹೋರಾಟವೆದ್ದಿರಬೇಕು. ಕೊನೆಗೆ ಗೃಹಸ್ಥಾಶ್ರಮವೇ ಆಶಾನನ ಜೀವನದಲ್ಲಿ ಮೇಲುಗೈಯಾಯಿತು. ಈ ಮಾನಸಿಕ ಪರಿವರ್ತನೆ ಆತನ ಕವಿತೆಗಳಾದ ವೀಣ ಪೂವು (ಬಿದ್ದ ಹೂವು) ನಳಿನಿ ಮತ್ತು ಲೀಲೆಗಳಲ್ಲಿ ಪ್ರತಿಬಿಂಬಿತವಾಗಿವೆ. ತಿರುವನಂತ ಪುರದ ವಾಸ ಮತ್ತು ಅಲ್ಲಿನ ಕೆಲಕುಟುಂಬಗಳೊಳಗೆ ಅವನಿಗಿದ್ದ ನಿಕಟ ಸಂಪರ್ಕ, ಇವುಗಳು ಆತನ ಸ್ವಭಾವವನ್ನು ಇನ್ನಷ್ಟು ಹಿತಕರವಾಗಿಯೂ ಉಲ್ಲಾಸಮಯ ವಾಗಿಯೂ ಮಾಡಲು ಸಹಾಯವಾದುವು. ಹಿಂದೆ ತಿಳಿಸಿರುವಂತೆಯೇ ಆಶಾನನು ಡಾ. ಪಲ್ಪುವಿನ ಕುಟುಂಬದೊಡನೆ ಒಂದು ವಿಶಿಷ್ಟವಾದ ವ್ಯಾಮೋಹವನ್ನಿಟ್ಟು ಕೊಂಡಿದ್ದನು. ಸಮಾಜದ ಕೆಲಸಕ್ಕಾಗಿ ಆತನು ಆಗಾಗ ಪ್ರವಾಸಮಾಡಬೇಕಾಗಿ ಬರುತ್ತಿದ್ದರೂ, ಯೋಗದ ಪ್ರಧಾನಕಾರ್ಯಾಲಯವಾದ ತಿರುವನಂತಪುರದಲ್ಲಿ ಆತನು ತನ್ನ ಹೆಚ್ಚಿನ ಸಮಯವನ್ನು ಕಳೆಯಬೇಕಾಗಿ ಬರುತ್ತಿತ್ತು. ಡಾ. ಪಲ್ಪುವಿನ ಸೋದರನಾದ ಪಿ. ಮಾಧವನ್ ವೈದ್ಯನು ಹೆಸರುವಾಸಿಯಾದ ಆಯುರ್ವೇದ ವೈದ್ಯನಾಗಿದ್ದನು. ಆಶಾನನು ವೈದ್ಯನ ಕುಟುಂಬದೊಡನೆ ಸುಮಾರು ಹದಿನಾಲ್ಕು ವರ್ಷಗಳಷ್ಟು ಕಾಲ ನಿಕಟವರ್ತಿಯಾಗಿದ್ದನು. ಆ ಕುಟುಂಬಕ್ಕೆ ಸೇರಿದವನಂತೆಯೇ

ಆತನನ್ನು ಅವರು ನೋಡುತ್ತಿದ್ದರು. ಆತನು ಹೆಚ್ಚು ಸಂಬಂಧವಿಟ್ಟುಕೊಂಡಿದ್ದ ಇನ್ನೊಂದು ಮನೆ ಡಾ. ಪಲ್ಪುವಿನ ಚಿಕ್ಕಪ್ಪನಾದ ಲೇಖಕ ಕುಮರುವಿನದು. ಲೇಖಕ ಕುಮರುವು ಯೋಗದ ಲೆಕ್ಕಪರಿಶೋಧಕನಾಗಿದ್ದನು. ಸ್ವಲ್ಪಕಾಲದವರೆಗೆ ಆತನು ಅದರ ಉಪಾಧ್ಯಕ್ಷನಾಗಿಯೂ ಇದ್ದನು.

ಆಮೇಲೆ ಲೇಖಕ ಕುಮರುವಿನ ಕುಟುಂಬದೊಡನೆ ಕವಿಯ ಸಂಬಂಧವು ಒಂದು ವಿಶಿಷ್ಟರೀತಿಯಿಂದ ಬೆಳೆಯಿತು. ಆ ಮನೆಯ ಯಜಮಾನಿಗೆ ಸಂಗೀತ ಸಾಹಿತ್ಯಗಳ ಗೀಳು ಇತ್ತು. ಆಕೆಯು ಆಶಾನನ ಕವಿತಾಕೃತಿಗಳನ್ನು ಬಹುವಾಗಿ ಮೆಚ್ಚಿಕೊಂಡಿದ್ದಳು. ಈ ಮನೆಯ ಅತಿಥಿ ಮುಂದೆ ಒಂದುದಿನ ಅಳಿಯನಾಗುವನೆಂದು ಯಾರೂ ಭಾವಿಸಲಿಲ್ಲ. ಆದರೆ ಅದೇ ಸಂಭವಿಸಿತು. ಅದು ಹಾಗೆ ಸಂಭವಿಸಿದುದು ವಿಚಿತ್ರ ರೀತಿಯಲ್ಲಿ. ನಲ್ವತ್ತೈದು ವರ್ಷದ ಆ ಕವಿಯು ಆತನ ಅದುವರೆಗಿನ ಶಿಷ್ಯೆಯಾಗಿದ್ದ ಹದಿನೇಳು ವರ್ಷದ ಹುಡುಗಿಯನ್ನು ಮದುವೆಯಾದನು. ಅವಳು ಹುಟ್ಟಿದ್ದುದು ಆತನು ಕಲ್ಕತ್ತೆಯ ಪ್ರವಾಸವನ್ನು ಮುಗಿಸಿ ಬಂದು ಆ ಕುಟುಂಬವನ್ನು ಸಂದರ್ಶಿಸಿದ್ದ ದಿನದಲ್ಲಿ !

ಮನ್ಮಥನ ರೀತಿ ವಿಚಿತ್ರ! ಕಾವಿಬಟ್ಟೆಯನ್ನು ಹೊದೆದ ಸನ್ಯಾಸಿಗಳನ್ನೂ ಆತನು ಬಿಡುವುದಿಲ್ಲ. ಪ್ರೇಮದ ಕುರಿತು ಕವಿತೆಗಳನ್ನು ಬರೆಯುವ ಕವಿಯನ್ನು ಆತನು ಹೇಗೆ ಬಿಟ್ಟಾನು ? ಲೇಖಕ ಕುಮರುವಿನ ಮಗಳಾದ ಭಾನುಮತಿ ಅಮ್ಮನ ಕುರಿತು ಆಗ ಯಾರೂ ಗಮನವೇ ಹರಿಸಿರಲಿಲ್ಲ. ಒಂದು ಘಟನೆಯಿಂದಾಗಿ ಆಕೆಯ ತಾಯಿಯ ಮಾನಸಿಕ ಆರೋಗ್ಯವು ಕೆಲಕಾಲ ಕೆಟ್ಟಿದ್ದುದರಿಂದ ತನ್ನ ಹನ್ನೊಂದನೇ ವಯಸ್ಸಿನಲ್ಲಿ ಆಕೆಯು ತನ್ನ ಶಿಕ್ಷಣವನ್ನು ನಿಲ್ಲಿಸಿ ಗೃಹಕೃತ್ಯದ ಜವಾಬ್ದಾರಿಯಲ್ಲಿ ಪಾಲುಗೊಳ್ಳಬೇಕಾಗಿತ್ತು. ಹತ್ತೊಂಬತ್ತು ವರ್ಷ ಪ್ರಾಯದ ಭಾನುಮತಿಯ ಅಕ್ಕನು ಆಕೆಯ ವಿವಾಹವಾದಮೇಲೆ ದುರಂತ ಪರಿಸ್ಥಿತಿಯಲ್ಲಿ ಸತ್ತುಹೋದುದೇ ಆ ಶೋಚನೀಯ ಸಂಭವ. ಇದರಿಂದಾಗಿ ಭಾನುಮತಿಗೆ ಸರಿಯಾದ ಶಾಲಾಶಿಕ್ಷಣದ ಪ್ರಯೋಜನ ದೊರೆಯಲಿಲ್ಲ. ಹಾಗಿದ್ದರೂ ಆಕೆಗೆ ಇಂಗ್ಲೀಷನ್ನು ಕಲಿಸಲು ಖಾಸಗಿಯಾಗಿ ಒಬ್ಬ ಶಿಕ್ಷಕನನ್ನು ನಿಯಮಿಸಲಾಯಿತು. ಈ ವ್ಯವಸ್ಥೆಯೂ ದೀರ್ಘಕಾಲ ಮುಂದರಿಯಲಿಲ್ಲ. ಆ ಮೇಲೆ ಆಕೆಯ ತಂದೆತಾಯಿಗಳು ಆಕೆಗೆ ಸಂಸ್ಕೃತದಲ್ಲಿ ಕೆಲಮಟ್ಟಿನ ಶಿಕ್ಷಣವನ್ನೂದಗಿಸಬೇಕೆಂದು ಬಯಸಿದರು. ಈ ವಿಷಯದಲ್ಲಿ ಕುಮಾರನ್ ಆಶಾನನ ಸಲಹೆಯನ್ನೂ ಕೇಳಿದರು. ಕೊನೆಗೆ ಆಶಾನನು ತನಗೆ ಅನುಕೂಲವಾದಾಗ ಆಕೆಗೆ ಪಾಠ ಕಲಿಸುವುದಾಗಿ ಒಪ್ಪಿಕೊಂಡನು. ಈ ಏರ್ಪಾಡಿನಿಂದ ಎಲ್ಲರಿಗೂ ಸಂತೋಷವಾಯಿತು. ಅದರಲ್ಲಿಯೂ ಹದಿನೈದು ವರ್ಷದ ಆ ಹುಡುಗಿಯು ತನಗೆ ಒಬ್ಬ ಪ್ರಸಿದ್ಧ ಕವಿಯು ಉಪಾಧ್ಯಾಯನಾಗಿ ದೊರೆತುದಕ್ಕೆ ತುಂಬಾ ಹೆಮ್ಮೆ ಪಟ್ಟಳು. ಭಾನುಮತಿಯ ಜೀವನವು ಪ್ರಕಾಶಗೊಂಡಿತು. ಆಕೆಯು ಸಂಸ್ಕೃತವನ್ನು ಆಸಕ್ತಿಯಿಂದ ಕಲಿತಳು. ಗುರುವಿಗೂ ಇಂತಹ ಚುರುಕುಳ್ಳ ವಿಧೇಯಳಾದ ಶಿಷ್ಯೆ ದೊರೆತುದಕ್ಕೆ ಮೆಚ್ಚುಗೆಯಾಯಿತು. ಕೆಲವೊಮ್ಮೆ ಆತನು ತನ್ನ ಸ್ವಂತ ಕವಿತೆಗಳನ್ನು ಆಕೆಯ ಮುಂದೆ ಹಾಡಿ ಅವುಗಳನ್ನು ಆಕೆಗೆ ವಿವರಿಸುತ್ತಿದ್ದನು.

ಯೌವನಕ್ಕೆ ಅಡಿಯಿಡುತ್ತಿದ್ದ ಶಿಷ್ಯೆಭಾನುಮತಿಗೆ ಗುರುವಿನ ಮೇಲಿದ್ದ ಮೆಚ್ಚುಗೆಯೂ ಆಮೇಲಿನ ಕೆಲವರ್ಷಗಳಲ್ಲಿ ಅವಳಿಗೆ ತಿಳಿಯದಂತೆಯೇ ರೂಪಾಂತರ ಹೊಂದುತ್ತಿತ್ತು. ಆಕೆಯ ಶರೀರವು ಪ್ರಬುದ್ಧವಾಯಿತು. ಮನಸ್ಸೂ ಆ ಪ್ರಾಯಕ್ಕನುಸಾರವಾಗಿಯೇ ಪರಿವರ್ತನೆಗೊಳ್ಳುತ್ತಲಿತ್ತು. ಇದೆಲ್ಲಾ ಪ್ರಕೃತಿಯ ನಿರಂತರದ ಆಟ. ಕವಿಯೇ ಹೀಗೆ ಹೇಳಿದ್ದಾನೆ—

ವಿಹಿತ ಕಾಲವು ಪ್ರಾಪ್ತವಾಗಲು
ಬಳ್ಳಿಗಳು ಹಂದರದಲ್ಲಿರಲಿ, ಮರದಲ್ಲಿರಲಿ
ಯಾರಿಗೂ ಕಾಯದೆಯೆ ಹೂವುಗಳ ಅರಳಿಸುವವು.

ಶಿಷ್ಯೆಯು ಗುರುವಿಗೆ ಪ್ರತಿದಿನವೂ ಹೂಗಳನ್ನು ಕೊಡುತ್ತಿದ್ದಳು. ಆಕೆಯ ಮನಸ್ಸು ಗುರುವನ್ನು ಆರಾಧಿಸುವಷ್ಟರ ಮಟ್ಟಿಗೆ ಆತನನ್ನು ಮೆಚ್ಚಿತ್ತು. ಎಂದಾದರೂ ಒಂದು ದಿನ ಆತನಿಗೆ ಬರಲಾಗದಿದ್ದರೆ, ಆಕೆಯು ದುಃಖಿತಳಾಗುತ್ತಿದ್ದಳು. ಆದರೆ ಭಾನುಮತಿಯೇ ತನ್ನ ಆತ್ಮವೃತ್ತದಲ್ಲಿ ಹೇಳಿಕೊಳ್ಳುವಂತೆ ಈ ಮೆಚ್ಚುಗೆಯು ಕಾಮ ಸಂಬಂಧವಾಗಿರಲಿಲ್ಲ. ಮೆಚ್ಚುಗೆಯು ಆರಾಧನೆಯಾಗಿ ರೂಪುಗೊಂಡ ಉದಾಹರಣೆ ಇದು. ಇದು ಹೀಗೆ ಅಕ್ಷರಶಃ ನಡೆದಿರದಿದ್ದರೂ, ಆ ವಯಸ್ಸಿನ ಹುಡುಗಿಯ ಬದಲಾಯಿಸುತ್ತಿರುವ ಮನೋಭಾವಗಳನ್ನು ನಾವು ಅರ್ಥಮಾಡಿಕೊಳ್ಳಬಹುದು. ಆದರೆ ಒಂದು ದೊಡ್ಡ ಸಂಸ್ಥೆಯ ಜವಾಬ್ದಾರಿಯಿರುವ, ಸಮಾಜದಲ್ಲಿ ಪ್ರತಿಷ್ಠೆಯಿರುವ, ನಾರಾಯಣಗುರುವಿನ ಆಧ್ಯಾತ್ಮಿಕ ವಾರಸುದಾರನೆಂದು ಭಾವಿಸಲಾದ, ಪಕ್ವ ಬುದ್ಧಿಯ, ನಲ್ವತ್ತೈದು ವರ್ಷ ವಯಸ್ಸಿನ ಕವಿಯ ವಿಷಯದಲ್ಲಿ ನಾವೇನನ್ನು ಹೇಳಬೇಕು? ತಾನಿಡುವ ಪ್ರತಿಯೊಂದು ಹೆಜ್ಜೆಯನ್ನೂ ಗಮನಿಸಬೇಕಾಗಿದ್ದುದು ಆತನ ಕರ್ತವ್ಯ. ಆದರೆ ಆತನು ಹಾಗೆ ಮಾಡುವನೇನು?

ಸಂಸ್ಥೆಯ ಕೆಲಸದಲ್ಲಿ ಯಾವಾಗಲೂ ಮಗ್ನನಾಗಿರುತ್ತಿದ್ದ ಆಶಾನನು ಸಂಜೆಯಹೊತ್ತಿನಲ್ಲಿ ಮಾತ್ರ ಭಾನುಮತಿಗೆ ಪಾಠಹೇಳಲು ಬಿಡುವು ಮಾಡಿಕೊಳ್ಳುತ್ತಿದ್ದನು. ಒಂದು ದಿನ ಜೋರಾಗಿ ಮಳೆ ಬಂದಿದ್ದಾಗ, ಆಶಾನನು ಅಲ್ಲಿಯೇ ರಾತ್ರಿಯಲ್ಲಿ ತಂಗಿರಬೇಕಾಯಿತು. ಆಮೇಲೆ, ಅದೇ ಮನೆಗೆ ವಾಸಬದಲಾಯಿಸಿದರೆ ಹೆಚ್ಚಿನ ಅನಾನುಕೂಲಗಳು ತಪ್ಪುವುವೆಂದು ಆ ಮನೆಯವರಿಂದ ಸೂಚನೆ ಬಂತು. ತಾನು ಕಲಿಸಿಕೊಡುತ್ತಿದ್ದುದಕ್ಕೆ ಪ್ರತಿಫಲವೇನನ್ನೂ ತೆಗೆದುಕೊಳ್ಳಲು ಯೋಚಿಸದಿದ್ದ ಆಶಾನನು ಈ ಸಲಹೆಯನ್ನು ಅಂಗೀಕರಿಸುವುದು ಸಹಜವಾಗಿಯೇ ಇತ್ತು. ಆ ದಿನಗಳಲ್ಲಿ ಆಶಾನನು ಇಬ್ಬರು ಜರ್ಮನ್ ವಿದ್ವಾಂಸರಿಗೆ ಸಂಸ್ಕೃತ ಹೇಳಿಕೊಡುತ್ತಿದ್ದನು. ಅವರು ತಿಂಗಳಿಗೆ ನಲವತ್ತು ರೂಪಾಯಿಗಳಂತೆ ವಿದ್ಯಾಶುಲ್ಕವನ್ನು ಕೊಡುತ್ತಿದ್ದರು. ಭಾನುಮತಿಯ ಮನೆಯಲ್ಲಿಯೇ ಆಶಾನನು ಊಟವಾಸಗಳನ್ನು ಮಾಡತೊಡಗಿದನು. ಗುರುವಿನ ಅನುಕೂಲಗಳನ್ನು ನೋಡಿಕೊಳ್ಳುವ ಹಕ್ಕು ಶಿಷ್ಯೆಗೆ ಸಹಜವಾಗಿಯೇ ಇತ್ತು.

ಹೇಗಿದ್ದರೂ ಈ ಸಂದರ್ಭಗಳಲ್ಲೆಲ್ಲಾ ಗುರುವು ಗುರುವಾಗಿಯೇ ಶಿಷ್ಯೆಯು ಶಿಷ್ಯೆಯಾಗಿಯೇ ಉಳಿದಿದ್ದರು. ಆಶಾನನು ಅಪೂರ್ವವಾದ ಆತ್ಮಸಂಯಮವುಳ್ಳ ಜಿತೇಂದ್ರಿಯ ವ್ಯಕ್ತಿಯಾಗಿದ್ದನು. ವ್ಯಾಮೋಹಕ್ಕೆ ಆತನು ಬಲಿಬೀಳುವ ಪ್ರಶ್ನೆಯೇ ಇರಲಿಲ್ಲ. ಪ್ರತಿಯೊಂದು ಹೆಜ್ಜೆಯನ್ನೂ ಯೋಚಿಸಿಯೇ ಇಡುತ್ತಿದ್ದುದರಿಂದ ಒಮ್ಮೆ ನಿರ್ಣಯಕ್ಕೆ ಬಂದನೆಂದರೆ, ಅದರಿಂದ ಆತನನ್ನು ತಿರುಗಿಸುವುದು ಕಷ್ಟವಾಗಿತ್ತು.

ಆತನು ಆ ಹುಡುಗಿಯನ್ನು ಪ್ರೀತಿಸುತ್ತಿದ್ದುದು ನಿಜ. ಆತನ ಮೇಲಿನ ಆಕೆಯ ಮೆಚ್ಚುಗೆಯು ಶಿಷ್ಯಂದಿರಿಗೆ ಗುರುವಿನಲ್ಲಿರುವ ಸಾಮಾನ್ಯವಾದ ಮೆಚ್ಚುಗೆಯಂತಿರದೆ ವಿಶಿಷ್ಟವಾದ ಪ್ರೇಮಭಾವದಿಂದ ಕೂಡಿತ್ತೆಂಬುದನ್ನು ಆತನು ನಿಧಾನವಾಗಿ ಕಂಡು ಕೊಂಡನು. ಇಬ್ಬರೂ ಹಾತೊರೆಯುತ್ತಿದ್ದ ಆಮೇಲಿನ ಹೆಜ್ಜೆಯ ಆಗುಹೋಗು ಗಳನ್ನು ತನ್ನ ಬಿಡುವಿನಸಮಯಗಳಲ್ಲಿ ಆತನು ಪರಿಶೀಲಿಸಿರಬೇಕು. ಆತನಿಗೆ ಅನೇಕ ಮಂದಿ ಗಂಡಸರೂ ಹೆಂಗಸರೂ ಸ್ನೇಹಿತರಿದ್ದರು. ಆದರೆ ಆತನು ತನ್ನ ಸ್ವಂತವೆಂದು ಹೇಳಿಕೊಳ್ಳತಕ್ಕ, ತಾನು ಮುಚ್ಚುಮರೆಯಿಲ್ಲದೆ ವ್ಯವಹರಿಸಬಹುದಾದ ಒಬ್ಬರೂ ಅವರಲ್ಲಿರಲಿಲ್ಲ. ಅಂತಹ ಒಂದು ಸಂಬಂಧದ ಅವಶ್ಯಕತೆ ಆತನಿಗೆ ಕಂಡುಬಂತು. ಭಾನುಮತಿಗೂ ಮನಸ್ಸಿನಲ್ಲಿ ಅಂತೆಯೇ ತೋರಿರಬೇಕು. ಈ ಅನಿಸಿಕೆ ಮೌನ ವಾಗಿಯೂ ನಿಧಾನವಾಗಿಯೂ ಬೆಳೆದುಕೊಂಡುಬಂತು.

ಉಬ್ಬಿದ ಬುಗ್ಗೆಯು ಎಲ್ಲಿಯಾದರೂ ಒಂದು ಕಡೆಯಲ್ಲಿ ಒಡೆಯಬೇಕಷ್ಟೆ ಒಂದು ನಿರ್ದಿಷ್ಟವಾದ ರೀತಿಯಲ್ಲಿ ಅದು ಏಕೆ ಒಡೆಯಿತೆಂದು ಹೇಳುವುದು ಸುಲಭ ವಲ್ಲ 1917 ರಲ್ಲಿ ನಾರಾಯಣಗುರುವಿನ ಜನ್ಮದಿನಾಚರಣೆಯು ವೈಭವಯುತವಾಗಿ ಆಚರಿಸಲ್ಪಡುವಾಗ, ಆಶಾನನಿಗೆ ಆ ಸಮಾರಂಭದಲ್ಲಿ ಪಾಲುಗೊಳ್ಳಲು ಬೆಳಗಿನ ಜಾವದಲ್ಲಿ ಬೇಗ ಎದ್ದು ಹೊರಡಬೇಕಿತ್ತು. ಆತನು ಬೆಳಿಗ್ಗೆ ಮೂರುವರೆ ಘಂಟೆಗೆ ಎದ್ದನು. ಅಂಗಳದಲ್ಲಿ ನಿಂತುಕೊಂಡು ಹಲ್ಲುಜ್ಜುತ್ತಿದ್ದಾಗ ಭಾನುಮತಿಯು ಆತನಿಗೆ ನೀರನ್ನು ತಂದುಕೊಟ್ಟಳು. ತೋರಿಕೆಯ ಕಾರಣವೇನೂ ಇಲ್ಲದೆ ಆಶಾನನು ಆಕೆಯ ಹಣೆಯ ಮೇಲೆ ಕೈಯನ್ನಿಟ್ಟನು. ಆಕೆಯನ್ನು ಆಶೀರ್ವದಿಸಿದನು. ಗುರುವಿನ ಎಂದಿನ ಆಶೀರ್ವಾದಕ್ಕಿಂತ ಇದರಲ್ಲಿ ಏನೋ ಹೆಚ್ಚಿನ ಅರ್ಥವು ಭಾನುಮತಿಗೆ ಭಾಸ ವಾಯಿತು. ಕ್ರಮೇಣ ತಾವಿಬ್ಬರೂ ಅನ್ಯೋನ್ಯ ಪ್ರೀತಿಗೊಂಡಿರುವುದು ಸ್ಪಷ್ಟ ವಾಯಿತು. ಪ್ರೇಮವು ಜನರನ್ನು ಸಣ್ಣವರನ್ನಾಗಿ ಮಾಡುವಂತೆಯೇ ಅವರನ್ನು ದೊಡ್ಡವರನ್ನಾಗಿಯೂ ಮಾಡುತ್ತದೆ. ಜೀವನದಲ್ಲಿ ಅತ್ಯುತ್ತಮ ಸಮತಾವಾದಿ ಯೆಂದರೆ ಪ್ರೇಮ. ನಲ್ವತ್ತೈದು ವರ್ಷದ ಆ ಪ್ರಸಿದ್ಧ ಕವಿಯೂ ಹದಿನೇಳರ ಆ ಮುಗ್ಧ ಬಾಲೆಯೂ ಈ ವಿಷಯದಲ್ಲಿ ಒಂದೇ ಮಟ್ಟದಲ್ಲಿದ್ದರು.

ಭಾನುಮತಿಯು ಆತ್ಮವೃತ್ತದಿಂದ ತಿಳಿದುಬರುವಂತೆ ಆಶಾನನು ಒಂದುದಿನ ತನ್ನ ದಿನನಿತ್ಯದ ಪಾಠವನ್ನು ಮುಗಿಸಿದಮೇಲೆ, ಕಪೋತಪುಷ್ಪವೆಂಬ ತನ್ನ ಕವಿತೆಯನ್ನು ಓದಿ ಹೇಳಿದನು. ಅದಾದಮೇಲೆ ತನ್ನ ಕೋಟಿನ ಕಿಸೆಯಿಂದ ಒಂದು ಒಣಗಿದ ಪುಷ್ಪವನ್ನು ತೆಗೆದು ಅದನ್ನು ಭಾನುಮತಿಗೆ ಉಡುಗೊರೆಯಾಗಿತ್ತನು. ಅದರ ಸೌರಭವನ್ನು ಅನೇಕ ವರ್ಷಗಳು ಕಳೆದ ಮೇಲೂ ಅವಳು ನೆನಪಿಗೆ ತಂದುಕೊಳ್ಳು

ತ್ತಿದ್ದಳು. 'ಬಿದ್ದ ಹೂ'ವನ್ನು ಬರೆದ ಕವಿಯು ತನ್ನ ಪ್ರಿಯೆಗೆ ಹೊಸಪುಷ್ಪಕ್ಕಿಂತ ಒಣಪುಷ್ಪವನ್ನು ಮೆಚ್ಚನ್ನೀವುದರಲ್ಲಿ ಮಹತ್ವವಿರುವಂತೆ ತೋರುತ್ತದೆ. ಈ ಘಟನೆಯಲ್ಲಿ ಬಹುಶಃ ಒಂದು ಸಾಂಕೇತಿಕ ಮಹತ್ವವಿರಬಹುದು.

ಈ ಗುರುಶಿಷ್ಯೆಯರ ಸಂಬಂಧದಲ್ಲಾದ ಮಾರ್ಪಾಡನ್ನು ಮೊದಲಬಾರಿ ಗುರುತಿಸಿದುದು ಭಾನುಮತಿಯ ತಾಯಿ. ತನ್ನ ಮಗಳು ಶಿಷ್ಯೆಯು ಇರಬೇಕಾದುದಕ್ಕಿಂತ ಬಹುದೂರ ಮುಂದುವರಿದುದನ್ನು ಆಕೆಯು ತಿಳಿದಳು. ಹೀಗೆ ವರ್ತಿಸಬಾರದೆಂದು ಮಗಳಿಗೆ ಸಲಹೆಯನ್ನೂ ಕೊಟ್ಟಳು. ಆದರೆ ಇದು ಪ್ರಯೋಜನವಾಗಲಿಲ್ಲ. ಕ್ರಮೇಣ ಲೇಖಕ ಕುಮರುವಿಗೆ ಮತ್ತು ಕುಟುಂಬದ ಇತರರಿಗೆ ಈ ವಿಷಯ ತಿಳಿದುಬಂತು. ಈ ಸಂಭವದಿಂದ ಅವರಿಗೆ ಯಾರಿಗೂ ಸಂತೋಷವಾಗಲಿಲ್ಲ. ಈ ವಿಷಯದಲ್ಲಿ ಮಾತುಕತೆ, ಗುಸುಗುಟ್ಟುವುದು, ಅಪವಾದ, ಇವೆಲ್ಲಾ ಸ್ವಲ್ಪಮಟ್ಟಿಗೆ ಹಬ್ಬಿತು.

ಕುಮಾರನ್ ಆಶಾನನು ತಿರುವನಂತಪುರದಲ್ಲಿ ಒಂದು ಸಣ್ಣ ಮನೆಯನ್ನು ಕೊಂಡುಕೊಂಡನು. ಅವನೂ ಅವನ ಗೆಳೆಯ ಅಯ್ಯಪ್ಪನೂ ಅಲ್ಲಿ ವಾಸಮಾಡಲು ಆರಂಭಿಸಿದರು. ಸ್ವಲ್ಪ ಸಮಯದಲ್ಲಿಯೇ ಕನ್ಯಾಪ್ರಾರ್ಥನೆ, ನಿಶ್ಚಿತಾರ್ಥ ಮೊದಲಾದ ಸಂಪ್ರದಾಯಗಳೆಲ್ಲಾ ನಡೆದು ಹೋದುವು. ಇತರರ ಟೀಕೆ ವಿಮರ್ಶೆಗಳನ್ನು ಗಣಿಸದೆ ಶೀಘ್ರದಲ್ಲಿಯೇ ಆ ಮದುವೆ ಆಗಬೇಕಾಗಿತ್ತು. ಆಶಾನನಂತಹ ಖ್ಯಾತಿವಂತ ವ್ಯಕ್ತಿ ಅಪ್ರಬುದ್ಧೆಯಾದ ಹದಿನೇಳು ವರ್ಷದ ಮುಗ್ಧಕನ್ಯೆಯನ್ನು ಮದುವೆಯಾಗ ಬಯಸಿರುವುದನ್ನು ನೋಡಿ ಕೆಲವರು ವಿಸ್ಮಯದಿಂದ ದಂಗಾದರು.

ಆಶಾನನು ಈ ವಿಷಯದಲ್ಲಿ ನಿರ್ಧಾರಮಾಡಿದ್ದರೂ ತನ್ನ ಗುರುವಾದ ಶ್ರೀನಾರಾಯಣನ ಅನುಮತಿ ಆಶೀರ್ವಾದಗಳನ್ನು ಪಡೆಯಬಯಸಿದನು. ಬಹುಶಃ ನೇರವಾಗಿ ಗುರುವನ್ನು ನೋಡುವುದು ಆತನಿಂದಾಗಲಿಲ್ಲ. ನಾಲ್ಕು ಸಂಸ್ಕೃತ ಶ್ಲೋಕಗಳ ಮೂಲಕ ತನ್ನ ಕೇಳಿಕೆಯನ್ನು ಗುರುವಿಗೆ ಕಳುಹಿಸಿದನು. ಈ ಮನೋವೇಧಕವಾದ ವೃತ್ತಾಂತವನ್ನು ಆಶಾನನು ತನ್ನ ದಿನಚರಿಯಲ್ಲಿ ಇಂಗ್ಲೀಷಿನಲ್ಲಿ ಬರೆದಿಟ್ಟುಕೊಂಡಿರುವನು.

'ನನ್ನ ಮದುವೆಗೆ ಅನುಮತಿಯನ್ನು ಪ್ರಾರ್ಥಿಸುತ್ತ ನಾನು ಸ್ವಾಮಿಗೆ ಬರೆದೆನು. ಆ ಪ್ರಾರ್ಥನೆಯು ನನ್ನಿಂದ ರಚಿತವಾದ ಸಂಸ್ಕೃತ ಶ್ಲೋಕರೂಪದಲ್ಲಿತ್ತು. —14, 2, 1917.'

ಇದರಂತೆಯೇ ಭಾನುಮತಿಯ ತಂದೆಯೊಡನೆ ತಾನು ಮಾತನಾಡಿದುದರ ವಿಷಯವೂ ಒಂದೇ ವಾಕ್ಯದಲ್ಲಿದೆ.

'ನಾನು ಶ್ರೀ. ಎಮ್. ಕುಮರು ಅವರೊಡನೆ ನನ್ನ ಮದುವೆಯ ಕುರಿತು ಮಾತನಾಡಿದೆನು—7, 2, 1917.'

ಸ್ವಾಮಿಗೆ ಕಳುಹಿಸಿದ ಕೇಳಿಕೆಯಲ್ಲಿ ಆತನ ಪೂರ್ವ ಅನುಮತಿಯಿಲ್ಲದೆ ತಾನು ನಿರ್ಧಾರವನ್ನು ತೆಗೆದುಕೊಂಡುದಕ್ಕಾಗಿ ಕ್ಷಮೆಯನ್ನು ಕೋರಿದ್ದನು. ಆ ಪತ್ರವನ್ನು ಸ್ವಾಮಿಯ ಮುಂದೆ ಎರಡುಸಲ ಓದಲಾಯಿತು. ಸ್ವಾಮಿಯ ಪ್ರತಿಕ್ರಿಯೆಯನ್ನು ಜನರು ಕುತೂಹಲದಿಂದ ಪ್ರತೀಕ್ಷಿಸುತ್ತಿದ್ದರು. ಆದರೆ ಸ್ವಾಮಿಯು ಒಂದು

ಮಾತನ್ನೂ ಹೇಳಲಿಲ್ಲ. ಒಂದು ವಾರದ ಮೇಲೆ ಸ್ವಾಮಿಯ ಆಶೀರ್ವಾದವನ್ನು ಪ್ರಾರ್ಥಿಸುತ್ತ, ತಂತಿಯೊಂದು ಬಂತು. ಶಿಷ್ಯನೊಬ್ಬನು ಸ್ವಾಮಿಯನ್ನು ಕೇಳಿದನು :

'ನಾವು ಅನುಮತಿಯನ್ನು ಕೊಡುವ ಉತ್ತರವನ್ನು ಕಳುಹಿಸಬೇಡವೇ ?'

'ಏಕೆ ? ಮದುವೆಯು ನಿಶ್ಚಯವಾಗಿ ಹೋಗಿದೆ. ಅನುಮತಿಗೆ ಈಗ ಏನು ಔಚಿತ್ಯವಿದೆ ?'

'ಆದರೆ ಪ್ರಾರ್ಥಿಸಿರುವುದು ಆಶೀರ್ವಾದವನ್ನು ?'

'ಆಶೀರ್ವಾದವಿದ್ದೇ ಇದೆ. ಅದನ್ನು ಕಳುಹಿಸುವ ಅಗತ್ಯವಿದೆಯೇನು ?'

ಹೀಗೆ ನಾರಾಯಣಗುರುವು ಆ ತಂತಿಗೆ ಉತ್ತರ ಕಳುಹಿಸಲಿಲ್ಲ, ಈ ಕುರಿತು ಆತನು ಸಂತೋಷವಾಗಿರಲಿಲ್ಲ. ಆದರೆ ಈ ವಿಷಯದಲ್ಲಿ ತಾನು ಪ್ರವೇಶಿಸಲೂ ಆತನು ಇಷ್ಟಪಡಲಿಲ್ಲ.

ಮದುವೆಯು ಸರಳವಾಗಿ, ಸಂಕ್ಷಿಪ್ತವಾಗಿ 1917 ರಲ್ಲಿ ಜರುಗಿತು. ಮದುಮಗ, ಮದುಮಗಳು ಮಾಲೆಯನ್ನು ಪರಸ್ಪರ ಹಾಕಿಕೊಳ್ಳುವುದೇ ಇದರಲ್ಲಿನ ಮುಖ್ಯ ಕಾರ್ಯಕ್ರಮವಾಗಿತ್ತು. ಸೆಕ್ರೆಟೇರಿಯಟಿನ ಕೃಷ್ಣ ಅಯ್ಯರ್ ಎಂಬವರು ಈ ಮದುವೆಗೆ ಪುರೋಹಿತರಾಗಿದ್ದರು. ಆಶಾನ್ ಮತ್ತು ಭಾನುಮತಿಯರು ಆಶಾನನ ಹೊಸಮನೆಯಲ್ಲಿ ಒಕ್ಕಲಾದರು. ಅಯ್ಯಪ್ಪನು ಈ ಹೊಸದಂಪತಿಗಳು ಅನ್ಯೋನ್ಯವಾಗಿ ಹೊಸಪಾಠಗಳನ್ನು ಯಾವ ಅಭ್ಯಂತರವೂ ಇಲ್ಲದೆ ಕಲಿಯಲು ಅನುಕೂಲವಾಗುವಂತೆ ಅಲ್ಲಿಂದ ಹೊರಟುಹೋದನು. ಆಶಾನನು ಪಾಠಗಳನ್ನು ಮುಂದರಿಸಿದನು. ಆದರೆ ಅವು ಸಂಸ್ಕೃತ ಸಾಹಿತ್ಯಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಅಡುಗೆ ಮಾಡುವುದು, ಗೃಹಕೃತ್ಯ ಮೊದಲಾದ ವಿಶಾಲರಂಗವನ್ನು ಅವು ಒಳಕೊಂಡಿದ್ದುವು. ಭಾನುಮತಿ ಅಮ್ಮನೇ ತನ್ನ ಆತ್ಮವೃತ್ತದಲ್ಲಿ ತಾನು ತನ್ನ ಗಂಡನಿಂದ ಹಲವಿಷಯಗಳನ್ನು ಕಲಿತೆನೆಂದೂ, ಅವು ತನಗೆ ಗೃಹಕೃತ್ಯದಲ್ಲಿ ಹೆಚ್ಚು ಉಪಯುಕ್ತವಾದುವೆಂದೂ ಬರೆದಿದ್ದಾಳೆ.

ಆಶಾನನು ತನ್ನ ಜೀವನದಲ್ಲಿ ಅನೇಕ ಟೀಕೆಗಳಿಗೆ ಒಳಗಾಗಬೇಕಾಯಿತು. ಈ ಟೀಕೆಗಳು ವೈಯಕ್ತಿಕದಿಂದ ಆರಂಭಿಸಿ ಸಾಮಾಜಿಕ ಮತ್ತು ಸಾಹಿತಿಕ ರಂಗಗಳವರೆಗೂ ವ್ಯಾಪಿಸಿದ್ದುವು. ಇವುಗಳಲ್ಲಿ ಹೆಚ್ಚಿನ ಟೀಕೆಗಳು ಅವನ ಸ್ವಂತ ಜಾತಿಯವರಿಂದಲೇ ಬರುತ್ತಿದ್ದುವು. ಯೋಗವು ದೊಡ್ಡಸಂಸ್ಥೆಯಾಗಿ ಬೆಳೆದಿತ್ತು. ಅದರ ಕಾರ್ಯದರ್ಶಿಯ ಸ್ಥಾನಕ್ಕೆ ಹೆಚ್ಚಿನ ಗೌರವವಿತ್ತು. ತಿರುವಾಂಕೂರಿನ ಪ್ರಜಾಸಭೆಯ ಸದಸ್ಯತ್ವವನ್ನು ಪಡೆಯುವಿಕೆ ಮೊದಲಾದ ಕೆಲವು ರಾಜಕೀಯ ಸವಲತ್ತುಗಳನ್ನೂ ಅದು ಪಡೆದಿತ್ತು. ಆಶಾನನು ದಿವಾನರನ್ನು ಸುಲಭವಾಗಿ ಸಂಧಿಸಬಹುದಿತ್ತು. ಆತನ ಶಿಫಾರಸುಗಳಿಗೆ ವಿಶಿಷ್ಟವಾದ ಬೆಲೆ ಇತ್ತು. ಈ ಪ್ರಭಾವವನ್ನು ಆತನು ಯೋಗ್ಯರಾಗಿ ಕಂಡುಬಂದ ತನ್ನ ಜಾತಿಯವರಿಗೆ ಸಹಾಯಮಾಡಲು ಉಪಯೋಗಿಸುತ್ತಿದ್ದನು. ಹೀಗಿದ್ದರೂ ಆತನ ಕೆಲ ಸಮಕಾಲೀನರಲ್ಲಿ ಅಸೂಯೆಯು ಹೆಡೆಯೆತ್ತಿತು. ಅವರು ಆಶಾನನ ಒಳ್ಳೆಯ ಹೆಸರನ್ನು ಕೆಡಿಸಲು ಯತ್ನಿಸಿದರು. ಆಶಾನನು ತನ್ನ ಪದವಿಯನ್ನು ತನ್ನ ಸ್ವಾರ್ಥಕ್ಕಾಗಿ ಬಳಸುತ್ತಿದ್ದಾನೆಂದು ಕೆಲವರು ಹೇಳಿದರು. ಇತರರು

ಆತನ ವೈಯಕ್ತಿಕ ಜೀವನವನ್ನು ಟೀಕೆ ಮಾಡತೊಡಗಿದರು. ಆತನ ಶಿಷ್ಯೆಯೊಂದಿಗೇ ನಡೆದ ಆತನ ಮದುವೆಯೂ ಈ ತರದ ಆರೋಪಗಳಿಗೆ ಹೆಚ್ಚು ಆಸ್ಪದವನ್ನಿತ್ತಿತು.

ಇಂತಹ ಕೆಲ ಆರೋಪಗಳು ಆಶಾನನ ನಿಕಟವರ್ತಿಗಳಿಂದಲೇ ಬಂದಾಗ ಆತನ ಮನಸ್ಸು ಕಹಿಯಾಯಿತು. ಈ ಸಂದರ್ಭದಲ್ಲಿ ತನ್ನ ಭಾವೋದ್ವೇಗವನ್ನು 'ಗ್ರಾಮ ವೃಕ್ಷತ್ತಿಲೆ ಕುಯಿಲ್' (ಗ್ರಾಮ ವೃಕ್ಷದಲ್ಲಿ ಕೋಗಿಲೆ—1919) ಎಂಬ ತನ್ನ ಕವಿತೆಯಲ್ಲಿ ತೋಡಿಕೊಂಡಿದ್ದಾನೆ. ಈ ಕವಿತೆಯ ಕೋಗಿಲೆಯು ಆಶಾನನೇ. ಮರವು ಎಸ್. ಎನ್. ಡಿ. ಪಿ. ಯೋಗವೆಂಬ ಸಂಸ್ಥೆ. ಈ ಮರದ ಯಜಮಾನನು ನಾರಾಯಣಗುರು. ಈ ಸಂಕೇತಗಳ ಮೂಲಕ ಆಶಾನನು ತನ್ನ ದುಃಖಗಳನ್ನೂ ನಿರಾಶೆಗಳನ್ನೂ ತಿಳಿಯಪಡಿಸಿ ಮನಸ್ಸನ್ನು ಹಗುರಾಗಿಸಿಕೊಂಡಿದ್ದಾನೆ. ಈ ಕವಿತೆಯು ಸುಂದರವಾಗಿದ್ದು ಆ ಸಂದರ್ಭದ ಆತನ ಮನಸ್ಥಿತಿಯ ಮೇಲೆ ಬೆಳಕನ್ನು ಬೀರುತ್ತದೆ.

'ಪ್ರೇಮದಿಂದೊಲಿದು ಹರಿಯುವ ಅಮೃತದಂತೆ
ದಿನದಿನವು ನಿನ್ನ ಹಾಡುಗಳ ಕೇಳಿ ವೃಕ್ಷ
ತಳಿರಿಡಿದ ತನ್ನ ಕೊಂಬೆಗಳ ಹರಹಿ,
ಆಗಸದಂತೆ ಕಾಳಿಮತೆಯಿಂದ ಕೂಡಿ
ಉನ್ನತಿಯನು ಮುಟ್ಟದುದಲ್ಲವೇ ?

ಕೋಗಿಲೆಯು ಹದಿನೈದು ವರ್ಷಗಳ ಕಾಲದಲ್ಲಿ ಸಮಾಜಕ್ಕೆ ಸಲ್ಲಿಸಿದ ಸೇವೆಯನ್ನು ಒಂದರ ಮೇಲೊಂದಾಗಿ ಕವಿಯು ವಿವರವಾಗಿ ತಿಳಿಸುತ್ತಾನೆ. ಆ ಕೋಗಿಲೆಯನ್ನು ಹಗಲಿನಲ್ಲಿ ಕಾಗೆಗಳೂ, ಇರುಳಲ್ಲಿ ಬಾವಲಿಗಳೂ ಆಕ್ರಮಿಸಿದುವು. ಆದರೂ ಕೋಗಿಲೆಯು ತನ್ನ ಸೇವೆಯಲ್ಲಿ ವಿಮುಖವಾಗದೆ ಮುಂದುವರಿಯಿತು. ಈ ಆತ್ಮವೃತ್ತದ ಸ್ವರೂಪ ಕವಿತೆಗೆ ಸೊಗಸನ್ನು ಹೆಚ್ಚಿಸಿದೆ.

ಹಿಂದೆ ಹೇಳಿದ್ದಂತೆಯೇ ಎಸ್. ಎನ್. ಡಿ. ಪಿ. ಯೋಗವು 1903 ರಲ್ಲಿ ಸ್ಥಾಪಿತವಾಗಿತ್ತು. 1919 ರ ವರೆಗೆ ಅದರ ಪ್ರಧಾನ ಕಾರ್ಯದರ್ಶಿಯಾಗಿ ಆಶಾನನು ಕೆಲಸಮಾಡಿದನು. ಯೋಗದ ಸಂಸ್ಥೆಯ ಘಟನೆಯ ಸಂವಿಧಾನದಂತೆ ಪ್ರಧಾನ ಕಾರ್ಯದರ್ಶಿಯು ಪ್ರತಿವರ್ಷವೂ ಆಯ್ಕೆಗೊಳ್ಳಬೇಕಾಗಿತ್ತು. ಸಂಸ್ಥೆಯ ಆರಂಭದಲ್ಲಿ ಆ ಸ್ಥಾನಕ್ಕೆ ಬರಲು ಯಾರಿಗೂ ಆಸಕ್ತಿ ಇರಲಿಲ್ಲ. ಆಮೇಲೆ ಕೆಲವರು ಆ ಅಧಿಕಾರವನ್ನು ಪಡೆಯಲು ಆಶಿಸಿದರೂ ಕುಮಾರನ್ ಆಶಾನನ ಸರಿಸಮವಾದ ಯೋಗ್ಯತೆಯವರು ಯಾರೂ ಇರಲಿಲ್ಲ. ಹೀಗಾಗಿ ಆತನೇ ಪ್ರತಿವರ್ಷ ಕಾರ್ಯದರ್ಶಿಯಾಗಿ ಆಯ್ಕೆ ಹೊಂದುತ್ತಿದ್ದನು. ಸಹಜವಾಗಿಯೇ ಕೆಲವರಿಗೆ ಇದು ಸಹಿಸಲಾಗಲಿಲ್ಲ. ಆ ಸ್ಥಾನದಲ್ಲಿ ಒಂದು ಬದಲಾವಣೆಯಾಗಬೇಕೆಂದು ಅವರು ಬಯಸುತ್ತಿದ್ದರು. ಆಶಾನನಿಗೆ ಆತನ ಕೆಲಸ ಕಷ್ಟವಾಗುವಂತೆ ಮಾಡಲು ಅವರು ತುಂಬಾ ಪ್ರಯತ್ನಿಸಿದರು. ಆಶಾನನಿಗೂ ಬದಲಾವಣೆ ಬೇಕೆಂದೆನಿಸಿತು. ಈ ಕುರಿತು ಆತನು 1915 ರಷ್ಟು ಹಿಂದೆಯೇ ಸ್ಪಷ್ಟವಾಗಿ ತಿಳಿಸಿದ್ದನು. ಆತನ ಕೀರ್ತಿಯು ತನ್ನ ಜನ್ಮಭೂಮಿಯ

ಮೇರೆಗಳನ್ನು ದಾಟಿ ವಿಸ್ತರಿಸಿತು. ಯೋಗದ ಹದಿನಾರನೇ ವಾರ್ಷಿಕ ಸಭೆಯಲ್ಲಿ ತಾನು ಆ ಅಧಿಕಾರದಿಂದ ಹೊರಬರುವ ನಿರ್ಧಾರವನ್ನು ಆಶಾನನು ಪ್ರಕಟಪಡಿಸಿದನು. ತನ್ನನ್ನು ಆ ಜವಾಬ್ದಾರಿಯಿಂದ ಬಿಡುಗಡೆ ಮಾಡುವಂತೆ, ತನ್ನ ನಿರ್ಧಾರಕ್ಕೆ ಸದಸ್ಯರು ಸಮ್ಮತಿಸುವಂತೆ, ಅವರ ಮನಸ್ಸನ್ನೊಲಿಸಲು ಆತನು ಸ್ವಲ್ಪ ಪ್ರಯತ್ನ ಪಡಬೇಕಾಯಿತು.

ಇದಕ್ಕೆ ಮೊದಲೇ ಯೋಗದ ಹೆಚ್ಚಿನ ಸಂಬಂಧವನ್ನು ನಾರಾಯಣ ಗುರುವು ತೊರೆದಿದ್ದನು. ಮುಂದಿನ ಈ ಪದ್ಯದಲ್ಲಿ ಇದು ಪ್ರತಿಬಿಂಬಿತವಾಗಿದೆ.

> 'ಇಲ್ಲಿಂದ ನೀವಿನ್ನು ಹೋಗಬಹುದು. ಈ ಮಹಾವೃಕ್ಷ
> ಶೋಕಾರ್ಹವಲ್ಲ, ತನ್ನ ತಪದ ಸಿದ್ಧಿಯ ಪಡೆದು
> ಈ ಸದನವನ್ನು ಮುನಿಯು ಬಿಟ್ಟುಹೋದ.
> ಏಕೆನೆ ಮಹಾತ್ಮರು ಯಾವ ವಸ್ತುವಿಗೂ ಅತಿಯಾಗಿ ಅಂಟಿಕೊಳರು.

ಆಶಾನನು ಯೋಗದ ಸಂಸ್ಥೆಯ ಅಧಿಕಾರ ಸಂಬಂಧವನ್ನು ತೊರೆದರೂ, ಸಮಾಜವು ಆತನನ್ನು ಹೊರಗೆ ಹಾಕಲಿಲ್ಲ. ಹದಿನೇಳನೇ ವಾರ್ಷಿಕ ಸಮ್ಮೇಳನಕ್ಕೆ ಆತನನ್ನು ಅಧ್ಯಕ್ಷನಾಗಲು ಕೇಳಿಕೊಂಡುದೇ ಇದಕ್ಕೆ ನಿದರ್ಶನ.

ಆಶಾನನು ತನ್ನ ವೈಯಕ್ತಿಕ ಸುಖಲಾಭಗಳಿಗೆ ಮನಕೊಡದೆ ಯೋಗಕ್ಕಾಗಿ ಹದಿನಾರು ವರ್ಷಗಳಿಗಿಂತಲೂ ಹೆಚ್ಚು ಶ್ರಮಿಸಿದನು. 1917 ರಲ್ಲಿ ಈ ಕೆಲಸಕ್ಕಾಗಿ ಆತನಿಗೆ ತಿಂಗಳಿಗೆ ಮೂವತ್ತು ರೂಪಾಯಿಯಷ್ಟು ಭತ್ತೆಯನ್ನು ಕೊಡುತ್ತಿದ್ದರಷ್ಟೆ. ಅದನ್ನು ಕ್ರಮೇಣ ಐವತ್ತು ರೂಪಾಯಿಗಳಿಗೆ ಏರಿಸಿದಾಗ ಸದಸ್ಯರು ಈ ಏರಿಕೆಯನ್ನು ತುಂಬಾ ವಿರೋಧಿಸಿದರು. ಇದರಿಂದ ಆತನು ಶ್ರಮಿಸುತ್ತಿದ್ದ ಸನ್ನಿವೇಶದ ಚಿತ್ರಣವನ್ನು ಅರ್ಥ ಮಾಡಿಕೊಳ್ಳಬಹುದು. ಹೀಗೆ ಜನಸಾಮಾನ್ಯದ ಹೊಗಳಿಕೆ ತೆಗಳಿಕೆಗಳಿಂದ ದೂರವಾಗಿದ್ದು, ತನ್ನ ಕೃತಿರಚನಾ ಸಾಮರ್ಥ್ಯವನ್ನು ಉಪಯೋಗಿಸಲು ಅನುಕೂಲವಾದ ಶಾಂತವಾದ ಗೃಹವಾಸಕ್ಕೆ ಆತನು ಹಾತೊರೆದುದು ಸಹಜವಾಗಿದೆ.

## 9. ಪ್ರರೋದನ ಮತ್ತು ಸೀತೆ

ಮದುವೆಯು ಕುಮಾರನ್ ಆಶಾನನ ಜೀವನಕ್ಕೆ ಒಂದು ಮಹತ್ವದ ತಿರುವನ್ನೊದಗಿಸಿತು. ಕವಿತಾ ರೂಪದಲ್ಲಿ ರಚಿಸಿದ 'ಕುಯಿಲ್' (ಕೋಗಿಲೆ—1918)— ತನ್ನ ಮೇಲೆ ಹೊರಿಸಿದ ಆರೋಪಗಳಿಗೆ ಉತ್ತರವಾಗಿತ್ತು. ಇದರ ರಚನೆಯಾಗಿ

ಸ್ವಲ್ಪ ಸಮಯದಲ್ಲಿಯೇ (1919 ರಲ್ಲಿ) ಆಶಾನನು ಯೋಗದಲ್ಲಿಯ ತನ್ನ ಅಧಿಕಾರವನ್ನು ಬಿಟ್ಟುಕೊಟ್ಟನು. ಆಶಾನನ ಸಾಹಿತಿಕ ಜೀವನದಲ್ಲಿ 1919 ನೇ ಇಸವಿಯು ಆತನು ಹೆಚ್ಚಿನ ಸಿದ್ಧಿಯನ್ನು ಕಂಡ ವರ್ಷ. ಈ ವರ್ಷದಲ್ಲಿಯೇ ಆತನು ತನ್ನ ಪ್ರಮುಖ ಕವಿತೆಗಳಾದ ಪ್ರರೋದನ ಮತ್ತು ಸೀತೆ—ಇವುಗಳನ್ನು ರಚಿಸಿದನು. ನಾವೀಗ ಇವನ್ನು ಒಂದೊಂದಾಗಿ ಪರಿಶೀಲಿಸುವ.

## ಪ್ರರೋದನ

ಆಶಾನನ ಪ್ರಮುಖ ಕವಿತೆಗಳಲ್ಲಿ ಶೋಕ ರಸಕ್ಕೆ ಹೆಚ್ಚಿನ ಪ್ರಾಧಾನ್ಯವಿರುವುದೆಂದು ನಾವು ಆರನೇ ಅಧ್ಯಾಯದಲ್ಲೇ ತಿಳಿಸಿದ್ದೇವೆ. ಪ್ರರೋದನವು ಪರಿಪೂರ್ಣತೆಯನ್ನು ಪಡೆದ ಶೋಕ ಗೀತ. ಪ್ರರೋದನವೆಂದರೆ ಅಧಿಕವಾದ ರೋದನ ಎಂದರ್ಥ. ವಿದ್ವಾಂಸ, ವೈಯಾಕರಣಿ ಮತ್ತು ಕವಿಯಾದ ಎ. ಆರ್. ರಾಜರಾಜವರ್ಮ (1863-1918) ನು ಮೃತಿಹೊಂದಿದಾಗ ರಚಿಸಿದ ಶೋಕ ಗೀತ ಇದು. ರಾಜರಾಜವರ್ಮನಲ್ಲಿ ಸಂಪ್ರದಾಯಾಭಿರುಚಿಯೂ, ಆಧುನಿಕದೃಷ್ಟಿಯೂ ಸಮ್ಮಿಳಿತವಾಗಿದ್ದುವು. ಆಶಾನನಿಗೆ ರಾಜರಾಜವರ್ಮನು ಸ್ನೇಹಿತನೂ ಪೋಷಕನೂ ಆಗಿದ್ದನು. ಆಶಾನನು ಇನ್ನೂ ಕವಿಯಾಗಿ ಪ್ರಸಿದ್ಧಿಗೆ ಬಾರದ ಆ ಆರಂಭ ದಿನಗಳಲ್ಲಿ, ಅವನ ಮೊದಲ ಪ್ರಧಾನ ಕವಿತೆಯಾದ ನಳಿನಿಗೆ, ಸುಂದರವಾದ ಮುನ್ನುಡಿಯನ್ನು ಬರೆದವನು ರಾಜರಾಜವರ್ಮನು. ಆತನು ಈ ಮುನ್ನುಡಿಯಲ್ಲಿ ಆಶಾನನು ನಳಿನಿ ಎಂಬ ಕವಿತೆಯಲ್ಲಿ ತೆಗೆದುಕೊಂಡ ಹೊಸ ಹೆಜ್ಜೆಯ ಮಹತ್ವವನ್ನು ಬೆಳಕಿಗೆ ತಂದಿದ್ದಾನೆ.

ಪ್ರಸಿದ್ಧಿಪಡೆದ ಅಂತಹ ವಿಮರ್ಶಕನಿಂದ ಇಂತಹ ಮುನ್ನುಡಿ ದೊರೆಯುವುದು ಸಣ್ಣ ಪ್ರೋತ್ಸಾಹವೇನೂ ಅಲ್ಲ. ಉತ್ತಮ ಸಾಹಿತ್ಯವು ಮೇಲಿನ ಜಾತಿಯವರಿಂದಲೇ ಬರಲು ಸಾಧ್ಯವೆಂದು ಜನರು ನಂಬುತ್ತಿದ್ದ ಆ ಸಮಾಜದಲ್ಲಿ ಕ್ಷತ್ರಿಯ ಜಾತಿಯ ರಾಜರಾಜವರ್ಮನು ಒಬ್ಬ ಅಪವಾದವಾಗಿದ್ದನು. ಇಂತಹ ಅಪವಾದಗಳ ಸಂಖ್ಯೆ ಆಗ ತೀರ ಕಡಿಮೆ. ಈ ಪರಿಸರದಲ್ಲಿ ಆ ಇಬ್ಬರು ಬುದ್ಧಿಜೀವಿಗಳ ಪರಿಚಯ ನಿಕಟವಾಯಿತು. ತನ್ನ ನಿಲವನ್ನೂ ತನ್ನ ಆಕಾಂಕ್ಷೆಗಳನ್ನೂ ರಾಜರಾಜವರ್ಮನಂತೆ ಪೂರ್ತಿಯಾಗಿ ಅರ್ಥಮಾಡಿಕೊಂಡ ಇನ್ನೊಬ್ಬ ಸಾಹಿತಿಯನ್ನು ಕೇರಳದಲ್ಲಿ ಕಾಣುವುದು ಅಸಾಧ್ಯವೆಂದು ಆಶಾನನು ತಿಳಿದಿದ್ದನು. ಆದುದರಿಂದ ಆತನು 1918 ರಲ್ಲಿ ಮೃತಿ ಹೊಂದಿದಾಗ ಈ ನಷ್ಟವನ್ನು ಸಹಿಸಲು ಆಶಾನನಿಗೆ ಸಾಧ್ಯವಾಗಲಿಲ್ಲ.

ತನ್ನ ಶೋಕಗೀತದ ಸುದೀರ್ಘಮುನ್ನುಡಿಯಲ್ಲಿ, ಆಶಾನನು ಈ ವಿಷಯದಲ್ಲಿ ತನ್ನ ವಿಶೇಷ ಆಸಕ್ತಿಯ ಕುರಿತು ಸ್ವಲ್ಪಮಟ್ಟಿಗೆ ತಿಳಿಸುತ್ತಾನೆ. 'ಆತನ ಮರಣದ ಹೃದಯಭೇದಕವಾದ ವರ್ತಮಾನವನ್ನು ನಾನು ಉತ್ತರ ತಿರುವಾಂಕೂರಿನಲ್ಲಿ ಪ್ರವಾಸದಲ್ಲಿದ್ದಾಗ ಕೇಳಿದೆ. ಈ ಅನಿರೀಕ್ಷಿತ ಶೋಚನೀಯ ವರ್ತಮಾನವು ಬಹು ದೊಡ್ಡ ಆಘಾತವಾಗಿತ್ತು ! ನನ್ನ ಎದೆಯೇ ಮರಕಟ್ಟಿ ಹೋಯಿತು. ಸಂಪ್ರದಾಯದಂತೆ ಕೆಲ ಪತ್ರಿಕೆಗಳು, ಸಂಚಿಕೆಗಳು ಈ ಸಂದರ್ಭದಲ್ಲಿ ಕೆಲ ಪದ್ಯಗಳನ್ನು ನಾನು ರಚಿಸಿ ಕಳುಹಿಸಬೇಕೆಂದು ಬಯಸಿದುವು. ಇದು ಇನ್ನಷ್ಟು ನೋವನ್ನು ನನಗೆ

ಉಂಟುಮಾಡಿತು. ಒಂದೇ ಒಂದು ಶಬ್ದವನ್ನು ಬರೆಯುವುದೂ ನನ್ನಿಂದ ಸಾಧ್ಯವಿರಲಿಲ್ಲ....ಕ್ರಮೇಣ ನನ್ನ ಎದೆಯ ಭಾರ ಕಮ್ಮಿಯಾಯಿತು. ಆ ಹಿರಿಯ ವ್ಯಕ್ತಿಯ ನೆನಪುಗಳೂ ಯೋಚನೆಗಳೂ ನನ್ನ ಮನಸ್ಸನ್ನು ತುಂಬಿದುವು. ಇವು ನನ್ನನ್ನು ಸುಮ್ಮನೆ ಇರಲು ಬಿಡಲಿಲ್ಲ. ಕೊನೆಗೆ ಒಂದು ಶೋಕಗೀತವನ್ನು ಬರೆದು ನನ್ನ ಹೃದಯಭಾರವನ್ನು ಕಳೆದುಕೊಳ್ಳಲು ನಾನು ನಿರ್ಧರಿಸಿದೆ.'

ಸ್ಮಶಾನದಲ್ಲಿ ರಾಜರಾಜವರ್ಮನ ಭೌತಿಕ ಶರೀರವು ಉರಿಯುತ್ತಿದ್ದಾಗ ತಿರುವಾಂಕೂರು, ಕೊಚ್ಚಿ, ಮಲಬಾರು* ಪ್ರಾಂತಗಳು ದೇವಿಯರಾಗಿ ಅಲ್ಲಿಗೆ ಬರುವರೆಂದು ಕವಿಯು ಚಿತ್ರಿಸಿರುವನು. ಆತನ ಆತ್ಮವು ಸ್ವರ್ಗವನ್ನು ತಲಪಿದಾಗ ಭಾಸ, ಠಾಕೂರರಂತಹ ಮಹಾಕವಿಗಳು ಆತನನ್ನು ಸ್ವಾಗತಿಸುವರು. ಕೈರಳಿಯನ್ನು (ಕೇರಳ ಭಾಷೆಯನ್ನು) ಸಾಂತ್ವನಗೊಳಿಸಲು ಸರಸ್ವತಿಯೇ ಅಲ್ಲಿ ಮೈದೋರುವಳು.

ಆಮೇಲೆ ಕವಿಗೆ ಇದೆಲ್ಲಾ ತನ್ನ ಬರಿಯ ಕಲ್ಪನೆಯೆಂದು ತಿಳಿದುಬರುವುದು. ಆಮೇಲೆ ಆತನು ಜನನ ಮರಣಗಳ ಜಿಜ್ಞಾಸೆಯನ್ನು ಮಾಡಿ ಕೊನೆಗೆ ಇಲ್ಲಿ ಅವಲಂಬನಯೋಗ್ಯವಾದ ಒಂದೇ ಒಂದು ವಿಷಯವೆಂದರೆ ಅದು ಪ್ರೇಮವಲ್ಲದೆ ಬೇರೆಯಲ್ಲ ಎಂಬ ನಿರ್ಧಾರಕ್ಕೆ ಬರುವನು. ಆಶಾನನ ಇತರ ಕವಿತೆಗಳಲ್ಲಿ ಕಂಡುಬರದ ಅನೇಕ ಆಧುನಿಕ ಸಾಂಪ್ರದಾಯಿಕ ಅಲಂಕಾರಗಳು ಈ ಕವಿತೆಯಲ್ಲಿ ಬರುವುವು. ಆದರೆ ಆತನು ಕವಿತೆಯ ವಸ್ತುವಿಗೆ ಬರುವಾಗ ಅಲ್ಲಿ ಚಿಂತನೆ ಅನುಭಾವಗಳು ಅದ್ಭುತವಾಗಿ ಐಕ್ಯಗೊಂಡಿರುವುದನ್ನು ನಾವು ನೋಡುವೆವು. ಹೀಗಿರುವ ಈ ಗೀತವನ್ನು ಮಲಯಾಳ ಭಾಷೆಯಲ್ಲಿರುವ ಇತರ ಶೋಕಗೀತೆಗಳು ಸರಿಗಟ್ಟಲಾರವು.

ಇಲ್ಲಿ ಕೆಲವು ಎದ್ದು ತೋರುವ ಉದಾಹರಣೆಗಳಿವೆ:

1. 'ಕ್ಷೀಣಿಸದ ಬುದ್ಧಿ ಶಕ್ತಿಯನು
ಎಂದಿಗೂ ಮಸಿಯಾರದ ಹೊನ್ನ ಲೇಖನಿಯ
ನೀನರ್ಪಿಸಿದೆ ವಾಗಧಿದೇವತೆ ಸರಸ್ವತಿಗೆ.
ನೀ ಪಡೆದ ವರಗಳು ವಿಪುಲ.
ಮಾತು ಕೃತಿಗಳಲಿ ನೀ ಮೆರೆದ ಪವಾಡಗಳೆನಿತೊ.
ಇದ ಕಂಡು ನಿನ್ನ ವೈರಿಗಳು ನಾಚಿದರು.
ಮಾತೆ ಕೈರಳಿಯು ಮಂದಹಾಸದಲಿ
ತನ್ನ ಬಿಡುಗಡೆಯ ನಿನ್ನಿಂದ ಈಕ್ಷಿಸಿದಳು!

2. 'ಸೂರ್ಯರಶ್ಮಿಗಳೇ! ಹೇಳಿ.
ಸೃಷ್ಟಿಯಂದಿನಿಂದ ಮರಣಕ್ಕೆ ಹೆದರುತಿಹ
ಮನದ ಬಿಸಿಜ್ವಾಲೆಗಳಲ್ಲವೇ ನೀವು?

* ಕೇರಳವೆಂದು ಕರೆಯಲ್ಪಡುವ ಮಲಯಾಳ ಮಾತನಾಡುವ ಪ್ರಾಂತವು ತಿರುವಾಂಕೂರು ಕೊಚ್ಚಿಗಳೆಂಬ ಎರಡು ದೇಶೀಯ ರಾಜ್ಯಗಳಿಂದಲೂ, ಭಾರತದ ರಾಜ್ಯಗಳ ಪುನರ್ವಿಭಜನೆಗಿಂತ ಮೊದಲಿನ, ಮದರಾಸು ಪ್ರಾಂತಕ್ಕೆ ಸೇರಿದ ಮಲಬಾರು ಜಿಲ್ಲೆಯಿಂದಲೂ ಕೂಡಿದುದಾಗಿದೆ.

ಗಾಳಿಗಳೇ ! ನೀವು ರಾಶಿಗೂಡಿಸಿದ
ಪ್ರಕೃತಿಯ ನಿಟ್ಟುಸಿರುಗಳಲ್ಲವೇನು !
ಮಳೆಗಳೇ ! ನೀವು ಕಳೆದೆನಿತೂ ವರುಷಗಳಿಂದ
ಶೋಖರಗೊಂಡ ಕಣ್ಣೀರಲ್ಲವೇನು ? '

ಮರಣವೆಂದರೇನು ? ಜನನ ಮರಣಗಳ ನಡುವಿನ ತಾತ್ಕಾಲಿಕ ವಿರಾಮವ್ರೋ ಅದು ? ಅಥವಾ ಒಂದು ಜೀವನದಿಂದ ಇನ್ನೊಂದಕ್ಕಾಗುವ ಮಾರ್ಪಾಡೋ ? ಸ್ವರ್ಗ, ನರಕ, ಪುನರ್ಜನ್ಮ, ಆತ್ಮ—ಇವುಗಳಲ್ಲಿ ಏನಾದರೂ ಸತ್ಯಾಂಶವಿದೆಯೇನು ? ಜೀವನದ ಅರ್ಥವೇನು ? ಅವ್ಯಕ್ತದ ರಹಸ್ಯವನ್ನು ನಾವು ಎಷ್ಟರಮಟ್ಟಿಗೆ ಭೇದಿಸಬಹುದು ? ಕವಿಯು ಇಂತಹ ವಿಚಾರಗಳನ್ನು ಕವಿತೆಯಲ್ಲಿ ತಂದಿದ್ದಾನೆ.

ಮರಣ ನಿಜಕೂ ಜೀವನದ ಸೊಗಸನು ಹೆಚ್ಚಿಸುವುದು.
ರಾತ್ರಿಯಿಲ್ಲದಿರೆ ಹಗಲು ಅದೆಷ್ಟು ಹಿಂಸೆಯೆನಿಸದು ?
ಹಗಲು ಕಮಲಪುಷ್ಪಗಳ ಸುಗಂಧದೊಡನೆ ನರ್ತಿಸಲಿ.
ಇರುಳು ತನ್ನ ನಿಡುಗೂದಲೊಳು ಮಲ್ಲಿಗೆಯಂತೆ ಶುಭ್ರನೈದಿಲಿ ಮುಡಿದು ನಿದ್ರಿಸಲಿ !

ಆಶಾನನು ಇಂಗ್ಲೀಷಿನ ಶೋಕಗೀತೆಗಳ ರೂಪರೇಖೆಗಳನ್ನು ಅಂಗೀಕರಿಸಿದ್ದನು. ವಿಶೇಷವಾಗಿ ಶೆಲ್ಲಿ ಕವಿಯ 'ಎಡೊನೈಸ್' ಎಂಬ ಶೋಕಗೀತೆಯನ್ನು ಆತನು ಉತ್ತಮಮಾದರಿಯಾಗಿ ಪರಿಗಣಿಸಿದ್ದನು. ಆದರೆ ಆತನ ಶೋಕಗೀತೆಯು ಯಾವುದೊಂದು ಇಂಗ್ಲೀಷು ಕೃತಿಯ ನಕಲಲ್ಲ. ಈ ಕೃತಿಯಲ್ಲಿ ಶೋಕಗೀತೆಗೆ ಅತ್ಯವಶ್ಯವಾವ ಪರಿಪಕ್ವತೆ ಇದೆ. ಆಳವಾದ ತತ್ವವಿದೆ. ಅನುಭಾವವಿದೆ.

## ಸೀತೆ

ಆಶಾನನ ಕವಿತೆಗಳು ಮಲಯಾಳ ಭಾಷಾ ವಿಮರ್ಶಕರಿಗೆ ಹುಲುಸಾದ ಕ್ಷೇತ್ರವನ್ನೊದಗಿಸಿದುವು. ಆತನ ಎಲ್ಲಾ ಕವಿತೆಗಳಿಗಿಂತ ಹೆಚ್ಚು ಆಳವಾದ ವಿಮರ್ಶೆಗೆ ಗುರಿಯಾದುದು ಸೀತೆ ಎಂಬ ಕವಿತೆ. ಈ ಕವಿತೆಯ ಪೂರ್ಣಹೆಸರು 'ಚಿಂತಾವಿಷ್ಟಯಾಯ ಸೀತೆ' (ಚಿಂತಾಮಗ್ನಳಾದ ಸೀತೆ) ಎಂಬುದು. ಸೀತೆಯ ಚಿಂತನೆಯಲ್ಲಿ ರಾಮಾಯಣ ಕತೆಯ ಪ್ರಮುಖವಾದ ಮನೋವೇಧಕ ಭಾಗಗಳೆಲ್ಲಾ ಸಿಂಹಾವಲೋಕಿತವಾಗಿವೆ. ಅದು ಪ್ರಕಟವಾದುದು 1919ರಲ್ಲಾದರೂ, ಅದರ ರಚನೆಯು 'ಲೀಲಾ' ಎಂಬ ಕೃತಿಯನ್ನು ಮುಗಿಸಿದೊಡನೆಯೇ ಆರಂಭವಾಗಿತ್ತು. ಆದರೂ ಐದು ವರ್ಷಗಳ ಸುದೀರ್ಘಕಾಲದಲ್ಲಿ ಎಂಬತ್ತು ಪದ್ಯಗಳು ಮಾತ್ರ ರಚಿಸಲಾದುವಷ್ಟೆ. ಉಳಿದ ನೂರಹನ್ನೆರಡು ಪದ್ಯಗಳು ಬರಿಯ ಕೆಲದಿನಗಳಲ್ಲಿ ಮುಗಿಸಲ್ಪಟ್ಟುವು. ಆತನ ಮದುವೆಯೂ 'ಯೋಗ'ದ ಜವಾಬ್ದಾರಿಗಳನ್ನು ತ್ಯಜಿಸಿದುದೂ ಈ ಸಂಭವಗಳ ಮಧ್ಯೆ. ಇದರಿಂದಲೇ ಯೋಗದ ಪ್ರಧಾನ ಕಾರ್ಯದರ್ಶಿಯಾಗಿ

ಎಷ್ಟೊಂದು ಗೊಂದಲದಿಂದ ಕೂಡಿದ ಕಷ್ಟ ಜೀವನವು ಆತನಿಗಿದ್ದಿರಬೇಕು ಎಂದು ನಾವು ತಿಳಿಯಬಹುದು.

ರವಿವರ್ಮನು ರಚಿಸಿದ ಸೀತೆಯ ಪಟವು ಈ ಕವಿತೆಗೆ ಸ್ಫೂರ್ತಿಯನ್ನೊದಗಿಸಿತಂತೆ. ಕವಿಯು ಕೆಲಸಲ ಅದನ್ನೇ ನೋಡುತ್ತ ವಿಚಾರ ಮಾಡುತ್ತ ಕುಳಿತುಕೊಳ್ಳುತ್ತಿದ್ದನಂತೆ. ರಾಮಾಯಣ ಕತೆಯು ಅನೇಕ ಕವಿಗಳಿಗೆ ಅನೇಕ ಭಾಷೆಗಳಲ್ಲಿ ಕವಿತೆಗಳನ್ನು ರಚಿಸಲು ವಸ್ತುವನ್ನು ಒದಗಿಸಿದೆ. ಉದಾಹರಣೆಗಾಗಿ ಭಾರತದ ವಿವಿಧ ಭಾಷೆಗಳಲ್ಲಿ ಸೀತೆಯ ಕುರಿತು ತುಂಬಾ ಬರೆಯಲ್ಪಟ್ಟಿದೆ. ಆದರೆ ಆಶಾನನ ಸೀತೆ ಅದ್ವಿತೀಯಳು. ಆತನ 'ಬಿದ್ದ ಹೂವು' ಹೇಗೆ ಅದ್ವಿತೀಯವೋ ಹಾಗೆಯೇ. ಅನೇಕರು ಈ ಕವಿತೆಯನ್ನು ಆತನ ಅತ್ಯುತ್ತಮ ಕೃತಿಯೆಂದು ಪರಿಗಣಿಸುತ್ತಾರೆ. ಪುರಾತನ ಕಾಲದ ಮಹಾಕಾವ್ಯದ ಕತೆಯಲ್ಲಿ ಅದೇನು ಕೈವಾಡವನ್ನು ಆಶಾನನು ಮೆರೆದನು?

ವಾಲ್ಮೀಕಿಯ ಕಾವ್ಯ ಗಂಡಸಿನ ದೃಷ್ಟಿಯಿಂದ ರಚಿತವಾದ ಕಾವ್ಯ. ಇಲ್ಲಿ ಹೆಂಗಸಿನ ದೃಷ್ಟಿಯಿಂದ ಸೀತೆಯು ರಾಮಾಯಣ ಕತೆಯನ್ನು ಪುನರವಲೋಕಿಸಿರುವಳು. ಸೀತೆಯ ಈ ಚಿಂತನೆಯು ನಡೆದುದು ತನ್ನ ಭೌತಿಕ ಶರೀರವನ್ನು ತ್ಯಜಿಸುವ ಹಿಂದಿನ ದಿನ. ರಾಮನಿಂದ ಪರಿತ್ಯಕ್ತಳಾದ ಸೀತೆಯು ವಾಲ್ಮೀಕಿಯಾಶ್ರಮದಲ್ಲಿ ಹನ್ನೆರಡು ವರ್ಷ ಇದ್ದಳು. ಇದೀಗ ಆ ಋಷಿಯು ರಾಮನ ಆಸ್ಥಾನಕ್ಕೆ ಸೀತೆಯ ಅವಳಿ ಮಕ್ಕಳೊಡನೆ ಹೋಗಿರುವನು. ಆ ಮಕ್ಕಳು ರಾಮನ ಮುಂದೆ ಹೊಸದಾಗಿ ರಚಿಸಿದ ರಾಮಾಯಣಕಾವ್ಯವನ್ನು ಪಠಿಸಲಿರುವರು. ಇದರಿಂದ ರಾಮನ ಮನಸ್ಸಿನಲ್ಲಿ ಭಾವಗಳೇಳಬಹುದು. ಆತನು ತನ್ನ ಕಾರ್ಯಕ್ಕಾಗಿ ಪಶ್ಚಾತ್ತಾಪಪಟ್ಟು ನಡೆದು ಹೋದ ಕಾರ್ಯಕ್ಕೆ ಪರಿಹಾರವನ್ನು ಚಿಂತಿಸಲೂ ಬಹುದು. ಇದರಿಂದಾಗಿ ತಾನು ಹೊಸ ಮಾನಸಿಕ ಸಮಸ್ಯೆಗಳನ್ನೆದಿರಿಸಬೇಕಾಗಿ ಬರುವುದೆಂದು ಸೀತೆಗೆ ಗೊತ್ತು. ಆ ಸಂಜೆ ಆಕೆಯು ಆಶ್ರಮದ ಸಮೀಪದ ವನೋದ್ಯಾನದ ನಿರ್ಜನಪ್ರದೇಶಕ್ಕೆ ಹೋಗಿ ಕುಳಿತು ಅಲ್ಲಿ ತನ್ನ ಸಂದ ಜೀವನದ ಅನುಭವಗಳನ್ನು ನೆನಪಿಗೆ ತಂದುಕೊಳ್ಳುವಳು. ಶಾಂತತೆಯಿಂದ ಹೇಳುವ ಅರ್ಥಪೂರ್ಣವಾದ ಈ ಸ್ವಗತಭಾಷಣಕ್ಕೆ ಇದಕ್ಕಿಂತ ಉಚಿತವಾದ ಬೇರೊಂದು ಸಂದರ್ಭ ದೊರೆಯಲಾರದು. ಕುಮಾರನ್ ಆಶಾನನು ಈ ಸಂದರ್ಭದ ಪೂರ್ಣಪ್ರಯೋಜನವನ್ನು ಪಡೆದಿದ್ದಾನೆ.

ಮೊದಲಿನ ಪದ್ಯದಲ್ಲಿಯೇ ಕವಿಯು ಅಚ್ಚರಿಗೊಳಿಸುವಷ್ಟು ಚುಟುಕಾದ ನಿರೂಪಣೆಯಿಂದ ವಿಷಯಕ್ಕೆ ಬರುತ್ತಾನೆ.

> 'ತನ್ನ ಮಕ್ಕಳು ಮಹಾಮುನಿಯೊಡನೆ
> ಅಯೋಧ್ಯೆಗೆ ತೆರಳಿದೊಂದು ಸಂಜೆ,
> ಸೀತೆ ಚಿಂತೆಯಲಿ ಮುಳುಗಿ
> ಕುಳಿತಳು ಆಶ್ರಮದ ಬಳಿಯ ತೋಟದಲಿ.'

ಕವಿಯು ಚಿಂತಾಮಗ್ನೆಯಾದ ಆಕೆಯನ್ನು ಆಶ್ರಮಪ್ರದೇಶದಲ್ಲಿರುವಂತೆ ಹೇಳದೆ ಸಮೀಪದ ವಾಟಿಯಲ್ಲಿರುವಂತೆ ನಿರೂಪಿಸಿದುದು ಅರ್ಥಪೂರ್ಣವಾಗಿದೆ. ಇತರರಾರೂ

ಅವಳಿಗೆ ತೋಂದರೆಕೊಡದಂತಹ ಸ್ಥಳದಲ್ಲಿ ಅವಳು ಉಪಸ್ಥಿತೆಯಾಗಿರುತ್ತಾಳೆ. ಸಮಯ ಸಾಯಂಕಾಲ. ಆದರೆ ಯಾವಾಗ ಸೂರ್ಯನು ಮುಳುಗುತ್ತಾನೆ, ಚಂದ್ರನು ಯಾವಾಗ ಉದಯವಾಗುತ್ತಾನೆ, ಎಂಬುದು ಆಕೆಗೆ ತಿಳಿಯದು. ಅನೇಕ ಏರಿಳಿತಗಳಿಂದ ಕೂಡಿದ ತನ್ನ ಗತ ಜೀವನದ ಚಿಂತೆಯಲ್ಲಿ ಅಷ್ಟೊಂದು ಮುಳುಗಿಹೋಗಿದ್ದಾಳೆ ಅವಳು.

ಆ ಮೇಲಿನ ಕೆಲ ಪದ್ಯಗಳಲ್ಲಿ ಹಚ್ಚ ಹಸುರಿನ ನೆಲ, ಆಕೆಯು ಕುಳಿತಿರುವ ಪುಷ್ಪಿತವಾದ ವಾಕ ಮರ, ನೈದಿಲೆಗಳ ಮಧ್ಯದಲ್ಲಿ ಪುಳಕಿಸುತ್ತಿರುವ ತಮಸಾನದಿ ಇತ್ಯಾದಿಗಳಿಂದ ಕೂಡಿದ ಆ ಸನ್ನಿವೇಶದ ಸುಂದರ ಚಿತ್ರಣವಿದೆ.

ಹದಿನಾರನೇ ಪದ್ಯದಲ್ಲಿ ಸೀತೆಯು ತನ್ನ ಶೋಕಕಾರಣವನ್ನು ತಿಳಿಸುತ್ತಾಳೆ.

> ಮೃಗಜಂತುಗಳು ಎನಿತೊ ನೋವನನುಭವಿಸುವವು
> ಆದರವುಗಳ ದುಃಖ ಬಹುಕಾಲವಿರದು
> ಮಾನಧನನಾದ ಮಾನವನ ಜೀವನ—ದುಃಖ—
> ಭಾರವೆಂದೆಂದಿಗೂ ಇಳಿಯದಿಹುದು.

ಈ ಸ್ವಗತ ಭಾಷಣ ಆರಂಭವಾಗುವುದು ಹನ್ನೆರಡನೇ ಪದ್ಯದಿಂದ. 'ಸೀತೆ'ಯ ವಿಶ್ಲೇಷಣಾತ್ಮಕ ಅಧ್ಯಯನದಲ್ಲಿ ಸುಕುಮಾರ ಅಳಿಕೊಡೆಯವರು ಈ ಕವಿತೆಯನ್ನು ನಾಲ್ಕು ಘಟ್ಟಗಳಾಗಿ ವಿಭಾಗಿಸುತ್ತಾರೆ. ಇವು ಚಿಂತನಾತ್ಮಕ, ವಿಮರ್ಶಾತ್ಮಕ, ಆರೋಪಣಾತ್ಮಕ ಮತ್ತು ಕಲ್ಪನಾತ್ಮಕ ಘಟ್ಟಗಳು.* 12 ರಿಂದ 44 ರ ವರೆಗಿನ ಪದ್ಯಗಳು ಚಿಂತನಾತ್ಮಕವಾಗಿವೆ. ಈ ಘಟ್ಟವು ಸಹಜವಾಗಿಯೇ ವಿಮರ್ಶಾತ್ಮಕ ಘಟ್ಟಕ್ಕೆ ಮುನ್ನಡೆಯುತ್ತದೆ (45-54). ಅದು ಹೆಚ್ಚು ತೀವ್ರವಾಗುತ್ತ ಆರೋಪಣಾತ್ಮಕ ರೂಪವನ್ನು ಪಡೆಯುತ್ತದೆ (80-133). ಹಾಗೂ ಕವಿತೆಯ ಕೊನೆಯಲ್ಲಿ ಸೀತೆಯು ಹೆಚ್ಚು ಪ್ರಶಾಂತಳೂ, ಅರ್ಥಮಾಡಿಕೊಳ್ಳಬಲ್ಲವಳೂ ಆಗುತ್ತಾಳೆ.

ಆಶಾನನ ಸೀತೆಯನ್ನು ಕೆಲ ವಿಮರ್ಶಕರು ಕಟುವಾಗಿ ಟೀಕಿಸಿದ್ದಾರೆ. ಸೀತೆಯ ಬಾಯಿಯಿಂದ ಅನುಚಿತವಾದ ಮಾತುಗಳನ್ನು ಹೇಳಿಸಿ, ಸೀತೆಯ ಮನಸ್ಸಿನಲ್ಲಿ ಅನುಚಿತವಾದ ಭಾವಗಳನ್ನಾರೋಪಿಸಿ, ಆಶಾನನು ರಾಮನ ಪಾತ್ರವನ್ನಿಳಿಸಿದ್ದಾನೆ ಎಂದು ಆ ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಆಶಾನನು ರಾಮನನ್ನು ಸಾಕ್ಷಿಕಟ್ಟೆಯಲ್ಲಿ ನಿಲ್ಲಿಸಿ ತೀಕ್ಷ್ಣವಾದ ಪಾಟಿಸವಾಲುಗಳನ್ನು ಹಾಕಿರುವುದು ನಿಜ. ಆದರೆ ಈ ಅನಪೇಕ್ಷಿತ ಚಿತ್ರಣದಿಂದ ಇಲ್ಲಿಯ ರಾಮನು ವಾಲ್ಮೀಕಿಯ ರಾಮನಿಗಿಂತ ಕೆಳಗಿನ ಮಟ್ಟಕ್ಕೆ ಹೋಗಿದ್ದಾನೆ ಎನ್ನುವುದು ಸರಿಯಾಗುವುದಿಲ್ಲ. ರಾಮನು ದೋಷರಹಿತನಾದ ದೇವನಲ್ಲ. ಅನೇಕ ಸದ್ಗುಣಗಳೂ ಕೆಲ ದೌರ್ಬಲ್ಯಗಳೂ ಇರುವ ಒಬ್ಬ ಸಹಜ ಮಾನವ. ಹೀಗಿರುವಾಗ ಆಶಾನನ ರಾಮನ ಟೀಕೆಯು ವಾಲ್ಮೀಕಿಯ ರಾಮನಿಗೂ ಅನ್ವಯಿಸಬೇಕಾದೀತು. ನಿಜವಾಗಿ ಪರ್ಯಾಲೋಚಿಸುವಾಗ ಪಾತ್ರನಿರೂಪಣೆಯಲ್ಲಿ ತೋರುವ ಈ ಸಹಜತೆಯೇ ಈ ಕವಿತೆಯನ್ನು ಅತ್ಯುನ್ನತಮಟ್ಟಕ್ಕೇರಿಸಿದೆ.

---

* ಅಳಿಕೊಡೆ, ಸುಕುಮಾರ್—ಆಶನ್ಡೆ ಸೀತಾಕಾವ್ಯಂ.

ಆಶಾನನ ಸೀತೆಯು ಧರ್ಮಿಷ್ಠೆ, ಗುಣವತಿ, ಇಂಗಿತಜ್ಞೆ. ಆದರೆ ಆಕೆಯೂ ರಕ್ತಮಾಂಸಗಳಿರುವ ಸ್ತ್ರೀಯೇ. ವಾಲ್ಮೀಕಿಯು ಆಕೆಯನ್ನು ಹತ್ತು ವರ್ಷಗಳಿಗೂ ಮೇಲೆ ಮರೆಯಲ್ಲಿರಿಸುತ್ತಾನೆ. ಆದರೆ ಆಶಾನನು ಆಕೆಯನ್ನು ವೇದಿಕೆಗೆ ತರಿಸುವುದಲ್ಲದೆ ತನ್ನ ಅಭಿಪ್ರಾಯಗಳನ್ನು ಬಹಿರಂಗಪಡಿಸುವಂತೆಯೂ ಮಾಡುತ್ತಾನೆ. ಆಕೆಯು ಯಾರೊಡನೆಯೂ ಮಾತನಾಡುತ್ತಿಲ್ಲವಾದುದರಿಂದ ನಿಸ್ಸಂಕೋಚವಾಗಿ ತನ್ನ ಅಂತರಂಗದ ಭಾವನೆಗಳನ್ನು ತಿಳಿಯಪಡಿಸಲು ಶಕ್ತಳಾಗುತ್ತಾಳೆ. ಇಲ್ಲಿ ನಾವು ಹಿಂದೆಂದೂ ಕಂಡಿರದ ಸೀತೆಯ ದೃಷ್ಟಿಕೋನದಿಂದ ವಿಷಯಗಳನ್ನು ತಿಳಿಯುತ್ತೇವೆ. ಸೀತೆಯ ದೃಷ್ಟಿಕೋನ ಇತರ ಸ್ತ್ರೀಸಾಮಾನ್ಯದ ದೃಷ್ಟಿಕೋನವೇ ಆಗಿದೆ.

ಇಲ್ಲಿನ ಸೀತೆಯ ಪಾತ್ರವನ್ನು ನಂಬಲು ಸಾಧ್ಯವಿಲ್ಲ ಎಂಬುದು ಈ ಕೃತಿಯ ಇನ್ನೊಂದು ಟೀಕೆ. ಸೀತೆಯ ಮನೋಸ್ಥಿತಿ ಪರಿವರ್ತಿತವಾಗುತ್ತ ಇರುತ್ತದೆ. ಹಿಂದಿನ ನೆನಪುಗಳನ್ನು ಆಕೆಯು ತಂದುಕೊಳ್ಳುವಾಗ ಒಂದು ಘಟ್ಟದಲ್ಲಿ ಸ್ವಗತವು ಆರೋಪಣಾತ್ಮಕವಾಗಿರುವುದೂ ಸಹಜವಾಗಿಯೇ ಇದೆ. ಸೂಕ್ಷ್ಮವಾಗಿ ವಿಮರ್ಶಿಸುವಾಗ ಮೇಲೆ ಕಾಣುವ ಈ ಆಭಾಸವು ಆಲೋಚನೆಯ ತಿರುವಲ್ಲದೆ ಬೇರೇನೂ ಅಲ್ಲವೆಂದೂ, ಇದು ಈ ರೀತಿ ಸಹಜವಾದುದರಿಂದ, ಇದು ಕವಿತೆಯ ಗುಣವೆಂದೂ ವ್ಯಕ್ತವಾಗುವುದು. ವಿಮರ್ಶಕರ ಇಂತಹ ಸಂಶಯಗಳಿಗೆಲ್ಲಾ ಉತ್ತರಗಳನ್ನು ಬೇರೆಲ್ಲಿಯೂ ಹುಡುಕಬೇಕಾಗಿಲ್ಲ. ಕವಿತೆಯಲ್ಲಿಯೇ ಅವು ಚದರಿಕೊಂಡಿರುವುದು ಕಾಣುತ್ತಿದೆ. ಸೀತೆಯು ಆ ಆಶ್ರಮದಲ್ಲಿ ಸನ್ಯಾಸಿನಿಯಂತೆ ಒಂದು ದಶಕವನ್ನು ಕಳೆದಿದ್ದಾಳೆ. ಆದರೆ

'ಜೀವಿ ಭೌತಿಕ ಶರೀರವನು ತ್ಯಜಿಸುವವರೆಗೆ,
ಹುಟ್ಟುಗುಣಗಳನದು ಒಳಕೊಂಡೇ ಇರುವುದು '.

ರಾಮನು ಮಾನವ, ಪತಿ ಮತ್ತು ಆಳುತ್ತಿರುವ ರಾಜ. ಅಂತೆಯೇ ಸೀತೆಯೂ ಸ್ತ್ರೀ, ಸತಿ ಮತ್ತು ಪ್ರಜೆ. ಆಶಾನನ ಸೀತೆಯು ತನ್ನನ್ನು ಈ ಮೂರು ದೃಷ್ಟಿಗಳಿಂದ ಚಿತ್ರಿಸಿಕೊಳ್ಳಲೂ ಅಂತೆಯೇ ರಾಮನನ್ನು ಈ ಮೂರು ಕೋನಗಳಿಂದ ನೋಡಿ ವಿವರಿಸಲೂ ಶಕ್ತಳಾಗಿದ್ದಾಳೆ. ಸೀತೆಯ ಅಂತರಂಗದಲ್ಲಿ ಬದಲಾಗುತ್ತಿರುವ ಮಾನಸಿಕ ಸ್ಥಿತಿಗಳನ್ನೂ ಭಾವಗಳನ್ನೂ ಪರಿಶೀಲಿಸುವುದು ಓದುಗನಲ್ಲಿ ಆಸಕ್ತಿಯನ್ನು ಹೆಚ್ಚಿಸುತ್ತದೆ. ಈ ಮನೋಲಹರಿಗಳ ರಮ್ಯಚಿತ್ರಗಳನ್ನು ನಾವೀಗ ಗಮನಿಸೋಣ.

ರಾಮನ ಬಗ್ಗೆ ಆಕೆಯ ಮಧುರ ಭಾವನೆಗಳು ಪೂರ್ಣವಾಗಿ ಮಾಯವಾದಂತೆ ಇಲ್ಲದಿದ್ದರೂ, ಅವು ಆಕೆಯ ಜೀವನದ ಪ್ರತಿಧ್ವನಿಗಳಂತೆ ಮಾತ್ರ ಇವೆ.

ಕ್ಷಣಮಾತ್ರದಗಲಿಕೆಯೂ ಎದೆಯ ಗಾಯಗೊಳಿಪನಿತು
ಪ್ರೇಮ ಹಿಂದಾಗಿದ್ದಿತು.
ಆದರದು ಮಲಗಿ ನಿದ್ರಿಸಿತು ಬಹುಕಾಲ
ತಲೆಯನೆತ್ತದೆ ಹೆಬ್ಬಾವಿನಂತೆ.

ಸೀತೆಯು ತನಗೆ ಹುಚ್ಚು ಹಿಡಿದಂತಿದ್ದ ತನ್ನ ಆ ಸಂಕಷ್ಟದ ಸಮಯ ಗಳನ್ನು ನೆನಪಿಗೆ ತಂದುಕೊಳ್ಳುತ್ತಾಳೆ. ಸೀತೆಯ ಮೇಲಣ ಪ್ರೀತಿ, ಅಣ್ಣನಾದ ಮತ್ತು ರಾಜನಾದ ರಾಮನಲ್ಲಿ ವಿಧೇಯತೆ, ಇವುಗಳೆರಡರ ನಡುವೆ ತುಯ್ಯಲಾಡು ತ್ತಿದ್ದ ಲಕ್ಷ್ಮಣನಿಗೆ ಆಕೆಯು ಕೃತಜ್ಞಳಾಗಿದ್ದಾಳೆ.

ರಾವಣನು ಆಕೆಯನ್ನು ಅಪಹರಿಸಿದ ಸಂದರ್ಭದಲ್ಲಿ ಆಕೆಯು ಹೇಳಿದ್ದ ಕಠಿಣ ವಾಕ್ಯಗಳಿಗಾಗಿ ಆಕೆಯು ಕ್ಷಮೆಯನ್ನು ಬೇಡುತ್ತಾಳೆ.

'ಪ್ರೀತಿಯ ತಮ್ಮ ! ನಾನು ತಿಳಿಯದೆ ಆಡಿಬಿಟ್ಟ
ಕಠಿಣ ವಾಕ್ಯಗಳ ಕ್ಷಮಿಸಿಬಿಡು.
ಅನಿಯಂತ್ರಿತವಾದ ಈ ಮನಸ್ಸು ಕೆಲವೊಮ್ಮೆ
ಓಡದ ಕುಮಾರ್ಗಗಳಿಲ್ಲವಲ್ಲಾ !'

ಆಕೆಯು ಆಮೇಲೆ ತನ್ನ ರಕ್ಷಕನಾದ ವಾಲ್ಮೀಕಿಯ ಕುರಿತೂ ತನ್ನ ಆಶ್ರಮ ವಾಸದ ಕುರಿತೂ ಯೋಚಿಸುತ್ತಾಳೆ. ಈ ಜೀವನವನ್ನು ನಗರಜೀವನದೊಂದಿಗೆ ಹೋಲಿಸುತ್ತಾಳೆ. ಪವಿತ್ರವಾದ ವಿವಾಹಕರ್ಮವು ಕೆಳಮಟ್ಟಕ್ಕಿಳಿದುದರ ಕುರಿತು ಚಿಂತಿಸುತ್ತಾಳೆ. ರಾಮನ ಮನಸ್ಸನ್ನು ವಿವಿಧ ಕೋನಗಳಿಂದ ಅಳೆಯುತ್ತಾಳೆ.

'ಅಪಕೀರ್ತಿ ಭಯಾಂಧನೀ ವಿಧಂ
ಸ್ವಪರಿಕ್ಷಾಳನ ತತ್ಪರಂ ನೃಪಂ
ಕೃಪಣೋಚಿತ ವೃತ್ತಿ ಮೂಲವೆ
ನ್ನಪವಾದಂ ದೃಢ ಮಾಡಲಿಲ್ಲವೇ.'

ಸೀತೆಯು ಅವರ ಹಿಂದಿನ ಸುಖಜೀವನವನ್ನು ತಿಳಿದಿದ್ದಾಳೆ. ಹೀಗಿದ್ದರೂ ರಾಮ ನನ್ನು ಈ ರೀತಿ ನೇರವಾಗಿ ಪ್ರಶ್ನಿಸಲು ಹಿಂದೆಗೆಯುವುದಿಲ್ಲ.

'ರಾಜನಿಗೆ ಈ ಭೂಮಿಯನ್ನು ಭರಿಸಲು
ನಿಹತಾರಿಗಳೂ ಯೋಗ್ಯರೂ ಆದ ಸಹಜಾತರಿಲ್ಲವೇನು ?
ಸಹಧರ್ಮಿಣಿಯೊಡನೆ ಸ್ವೇಚ್ಛೆಯಿಂದ ಬಾಳಲು
ನೃಪನಿಗೆ ಕಾಡಿನಲ್ಲಿ ಸ್ಥಳವಿಲ್ಲವೇನು ?'

ಆತನ ಪರಿಸ್ಥಿತಿಯನ್ನು ಕ್ರಮೇಣ ಆಕೆಯು ಅರ್ಥಮಾಡಿಕೊಳ್ಳುತ್ತಾಳೆ. ರಾಮನು ಯಾಗಮಂಟಪದಲ್ಲಿ ಸೀತೆಯ ಸ್ವರ್ಣಪ್ರತಿಮೆಯನ್ನು ಪ್ರತಿಷ್ಠಿಸಿರುವುದನ್ನು ಆಕೆಯು ತಿಳಿಯುತ್ತಾಳೆ.

'ನ್ಯಾಯದಹಾದಿ ದುಃಖದಾಯಕವು. ಅದರ ಗತಿ ಕಷ್ಟ!
ಅಯ್ಯೋ ರಾಜ ಪರತಂತ್ರನು ;
ರಾಜ್ಯದಿಂದೆನ್ನ ಹೊರದೂಡಿ
ನನ್ನ ಪ್ರತಿಮೆಯನ್ನಾರಾಧಿಸುವನಲ್ಲಾ !'

ಆಶಾನನ ಸೀತೆಯು ತಪ್ಪು ಆರೋಪಕ್ಕೆ ಗುರಿಯಾದ, ವಿಮರ್ಶಿಸುವ ಭಾವೋದ್ವೇಗಗಳಿಂದ ಕೂಡಿದ ಹೆಂಗುಸು ಮಾತ್ರವಲ್ಲ. ಆಕೆಯು ಆಳವಾದ ಕನಿಕರವನ್ನೂ ತೋರಿಸುತ್ತಾಳೆ. ಇನ್ನೊಬ್ಬರನ್ನು ಅರ್ಥಮಾಡಿಕೊಳ್ಳುತ್ತಾಳೆ. ವಿಷಯವನ್ನು ಸರಿಯಾಗಿ ತಿಳಿಯುತ್ತಾಳೆ. ನಿಷ್ಪಕ್ಷಪಾತವಾದ ತೀರ್ಮಾನವನ್ನೂ ಕೊಡುತ್ತಾಳೆ.

ಮನದಶಾಂತ ಹುಯಿಲಿನಲಿ ಸ್ವಾಭಿಮಾನವಶಳಾಗಿ
ನಿನ್ನೊಳು ಕಳಂಕ ರೇಖೆಗಳ ತೋರಿಸಿದೆ.
ನನ್ನೊಡೆಯ ! ಈ ನಿನ್ನ ಕಾಂತೆಯ ಕ್ಷಮಿಸು.

ಕೊನೆಯಲ್ಲಿ ಆಕೆಯು ಪ್ರಕೃತಿಯನ್ನೂ ಪ್ರಕೃತಿಜೀವಿಗಳನ್ನೂ ಬೀಳ್ಕೊಳ್ಳುತ್ತಾಳೆ.

' ರಮಣೀಯ ವನಂಗಳೇ !
ದುಂಬಿಗಳು ಗುಂಗಾನದಲಿ ಮುತ್ತಿರುವ ಸುಮಗಳೇ !
ನಿಮ್ಮೊಳವ್ಯಾಹತಂ ಸುಖಿಸಿದ ನಾನು
ನಿಮ್ಮನು ಈಗ ಬೀಳ್ಕೊಳ್ಳುವೆ ?

ಕಟ್ಟಕಡೆಗೆ ಸೀತೆಯು ತನ್ನ ಪತಿಯಾದ ರಾಘವನನ್ನು ಬೀಳ್ಕೊಳ್ಳುವುದು ನಿಜವಾಗಿಯೂ ಹೃದಯಸ್ಪರ್ಶಿಯಾಗಿದೆ.

' ಪ್ರಿಯ ರಾಘವನೇ ! ನಿನಗೆ ವಂದನೆಯು !
ನಿನ್ನ ತೋಳುಗಳ ಆಶ್ರಯವ ತೊರೆದು
ನಾ ಕಟ್ಟಕಡೆಗೆ ಸ್ವತಂತ್ರಳಾಗಿ ನಿರ್ಭಯಳಾಗಿ
ಉನ್ನತಾಕಾಶದಲಿ ಮೇಲಕೇರುತಿಹೆನು.

ರಾಮನಲ್ಲಿ ಆಕೆಗಿದ್ದ ಅಸಾಮಾಧಾನವು ಸಂಪೂರ್ಣವಾಗಿ ತೊಲಗಿಹೋಗುವುದು. ಸೀತೆಯು ಆ ಸಮಗ್ರ ಸಂದರ್ಭವನ್ನು ವಿಚಾರಿಸಿ ತಿಳಿದುಕೊಳ್ಳಲು ಶಕ್ತಳಾಗುವಳು.

ಈ ಕವಿತೆಯು ಪ್ರತಿಯೊಂದು ಪದ್ಯವೂ ಮನನಾರ್ಹವಾಗಿದೆ. ಪದ್ಯದ ಪ್ರತಿಯೊಂದು ಶಬ್ದವನ್ನೂ ಕವಿಯು ತೂಕಮಾಡಿ ಉಪಯೋಗಿಸಿದ್ದಾನೆ. ಈ ಹೃದಯಸ್ಪರ್ಶಿಯಾದ ಕವಿತೆಯಲ್ಲಿ ಆಶಾನನು ಕಲೆಯು ಮೂಷೆಯಲ್ಲಿ ಜೀವನವನ್ನು ಎರಕಹೊಯ್ದಿರುವನು. ಇದು 'ಪ್ರರೋದನ'ಗಿಂತ ಸರಳವಾಗಿದೆ. ಆದರೆ ಆಳದಲ್ಲೇನೂ ಕಡಿಮೆಯಾಗಿಲ್ಲ. ಮಾನವನ ಮನಸ್ಸಿಗಿಂತ ಜಟಿಲವಾದುದು ಬೇರೊಂದಿಲ್ಲ. ಆಶಾನನು ಮಾನವ ಮನಸ್ಸಿನ ಸುಪ್ತ ಪ್ರಜ್ಞೆ, ಉಪಪ್ರಜ್ಞೆ, ಹಾಗೂ ಜಾಗ್ರತಪ್ರಜ್ಞೆಗಳ ಪದರುಗಳನ್ನು ಅಪೂರ್ವವಾದ ಜಾಣ್ಮೆಯಿಂದ ವಿಶ್ಲೇಷಿಸಿ ಉಪಯೋಗಿಸಿಕೊಂಡಿರುವನು. ಇಂತಹ ಜಾಣ್ಮೆ ಮಲಯಾಳ ಸಾಹಿತ್ಯದಲ್ಲೇ ಕಂಡುಬರುವುದು ಅಪೂರ್ವ. ಮೊದಲಿನ ಮತ್ತು ಕೊನೆಯ ಕೆಲವು ಪದ್ಯಗಳನ್ನು ಬಿಟ್ಟರೆ, 'ಚಿಂತಾವಿಷ್ಟಯಾಯ ಸೀತೆ' ಎಂಬ ಈ ಕವಿತೆಯು ನೀಳವಾದ ಒಂದು ಸ್ವಗತವಾಗಿದೆ. ಸ್ವಾನುಭಾವದ ತೀವ್ರತೆ, ಆತ್ಮವೃತ್ತದಂತಿರುವ ನಿರೂಪಣೆಗಳನ್ನು ಪರಿಗಣಿಸಿದರೆ ಈ ಕವಿತೆಯನ್ನು ಅತಿಶಯ ಗುಣವುಳ್ಳ ಒಂದು ಭಾವಗೀತೆ ಎನ್ನಬಹುದು. ಈ ಭಾವ

ಗೀತೆಯು ಅಮರವಾದ ಮಹಾಕಾವ್ಯವನ್ನಾಧರಿಸಿ ರಚಿತವಾದ ಆತ್ಮಪರೀಕ್ಷಣದ ಒಂದು ಕೃತಿ.

# 10 ಸಮಾಜಕ್ಕೆ ಸಂಬಂಧಿಸಿದ ಕವಿತೆಗಳು

ಮಹಾಕವಿ ಎಂಬ ಬಿರುದನ್ನು ಸಂಸ್ಕೃತ ಕಾವ್ಯಶಾಸ್ತ್ರಕ್ಕೆ ಅನುಸಾರವಾಗಿ ಮಹಾಕಾವ್ಯವನ್ನು ರಚಿಸಿದ ಕವಿಗೆ ಸಾಮಾನ್ಯವಾಗಿ ಕೊಡುತ್ತಾರೆ. ಇತರ ಸಾಮಾನ್ಯ ಕವಿಗಳು ಮಹಾಕವಿ ಎಂಬ ಬಿರುದನ್ನು ಗಳಿಸಿಕೊಳ್ಳಲು ದೀರ್ಘವಾದ ಮಹಾಕಾವ್ಯಗಳನ್ನು ರಚಿಸುವ ಪ್ರಯತ್ನದಲ್ಲಿ ಮಗ್ನರಾಗಿದ್ದಾಗ, ಕುಮಾರನ್ ಆಶಾನನು ಈ ವಿಷಯದಲ್ಲಿ ನಿರ್ಲಿಪ್ತನಾಗಿಯೇ ಇದ್ದನು. ನಿರ್ದಿಷ್ಟ ನಿಯಮಗಳಿಗೆ ಅನುಗುಣವಾಗಿ ಕೊಡುವ ಬಿರುದು ಬಾವಲಿಗಳಲ್ಲಿ ಆತನು ಆಸಕ್ತಿಯನ್ನು ತೋರಲಿಲ್ಲ. ಮಾತ್ರವಲ್ಲ, ಆತನು ಮಹಾಕಾವ್ಯದ ರೀತಿಯ ಕೃತಿಯು ಆಧುನಿಕ ಯುಗಕ್ಕೆ ಹೊಂದಿಕೆಯಾಗುವುದೆಂದೂ ಅಭಿಪ್ರಾಯಪಡಲಿಲ್ಲ. ಆದುದರಿಂದ ಆತನು ಉದ್ದೇಶಪೂರ್ವಕವಾಗಿಯೇ ಮಹಾಕಾವ್ಯರಚನೆಯನ್ನು ಬಿಟ್ಟುಬಿಟ್ಟನು. ಆದರೂ ಮಹಾಕವಿ ಎಂಬ ಬಿರುದು ಆತನಿಗೆ ಸಹಜವಾಗಿಯೇ ಬಂದುಬಿಟ್ಟಿತು. ಆತನಿಗೆ ಇನ್ನೂ ಹೆಚ್ಚಿನ ಸನ್ಮಾನವು ಪ್ರಿನ್ಸ್ ಆಫ್ ವೇಲ್ಸರು 1922 ರಲ್ಲಿ ಮದ್ರಾಸನ್ನು ಸಂದರ್ಶಿಸಿದಾಗ, ಅವರಿಂದ ದೊರೆಯಿತು. ಅವರು ಆತನನ್ನು ಭಾರತದ ಪ್ರಸಿದ್ಧ ಕವಿಯೆಂಬುದಾಗಿ ಗೌರವಿಸಿ ಪಟ್ಟೆಯ ಶಾಲನ್ನೂ ಚಿನ್ನದ ಕಡಗವನ್ನೂ ಬಹುಮಾನವಾಗಿ ಕೊಟ್ಟರು. ಈ ಅಮೂಲ್ಯವಾದ ಶಾಲನ್ನು ಧರಿಸಿದ ಕವಿಯ ಭಾವಚಿತ್ರವು ತುಂಬಾ ಜನಪ್ರಿಯತೆಯನ್ನು ಗಳಿಸಿದೆ.

ಆಶಾನನ ಕಾವ್ಯಜೀವನದ ಕೊನೆಯ ಘಟ್ಟಕ್ಕೆ ನಾವೀಗ ಬಂದಿದ್ದೇವೆ, ಈ ಅಧ್ಯಾಯದಲ್ಲಿ ನಾವು ಆತನಿಂದ ರಚಿತವಾದ 'ದುರವಸ್ಥೆ' ಮತ್ತು 'ಚಂಡಾಲ ಭಿಕ್ಷುಕಿ' ಎಂಬ ಇನ್ನೆರಡು ಕೃತಿಗಳನ್ನು ನೋಡುವೆವು. ಈ ಕೃತಿಗಳು ಸಮಾಜಕ್ಕೆ ಸಂಬಂಧಿಸಿದ ಕೃತಿಗಳು. ಇಂತಹ ಕವಿತೆಗಳನ್ನು ಇಷ್ಟು ಶಕ್ತಿಯುತವಾಗಿ, ನಿಖರವಾಗಿ ಬೇರೆ ಯಾರಿಗೂ ಹೇಳಲು ಸಾಧ್ಯವಾಗುತ್ತಿರಲಿಲ್ಲ. ಜಾತಿಪದ್ಧತಿಯ ಅನ್ಯಾಯಗಳು, ಅದರಿಂದಾಗಿ ಹಿಂದೂವರ್ಗದ ಕೆಲಜಾತಿಗಳು ಅನುಭವಿಸುತ್ತಿದ್ದ ಸಂಕಷ್ಟಗಳು, ಇವು ಆ ಕವಿಯನ್ನು ಕೆಲಕಾಲದವರೆಗೆ ಯೋಚನೆಗೆ ಈಡುಮಾಡಿರಬೇಕು. ಎಸ್. ಎನ್. ಡಿ. ಪಿ. ಯೋಗದ ಕಾರ್ಯದರ್ಶಿಯಾಗಿ ಹಿಂದುಳಿದವರ ಹಕ್ಕು ಬಾಧ್ಯತೆಗಳಿಗಾಗಿ ಹೋರಾಡುವ ಅನೇಕ ಸಂದರ್ಭಗಳು ಆತನಿಗೆ ದೊರೆತಿದ್ದುವು. ಆದರೆ ಆತನು ಈ ಎರಡು ಕವಿತೆಗಳನ್ನು 1923 ರಲ್ಲಿ ರಚಿಸುವವರೆಗೆ, ಕವಿತೆಯನ್ನು ಸಮಾಜೋದ್ಧಾರ ಕಾರ್ಯದಲ್ಲಿ ಉಪಯೋಗಿಸಿರಲಿಲ್ಲ.

## ದುರವಸ್ಥೆ

ದುರವಸ್ಥೆ ಎಂಬ ಕವಿತೆಯು ಬಹು ಹೆಚ್ಚಿನ ಟೀಕೆಗಳಿಗೆ ಗುರಿಯಾದ ಕವಿತೆ. ಇದರ ಪ್ರಕಟಣೆಯು ಮಲಯಾಳ ವಿಮರ್ಶಕರನ್ನು ಕೆರಳಿಸಿತು. ಅವರಲ್ಲಿ ಹೆಚ್ಚಿನವರು ಮೇಲು ಜಾತಿಗೆ ಸೇರಿದವರು. ಅವರು ಈ ಕವಿತೆಯ ವಸ್ತುವನ್ನೂ ಕತೆಯ ಔಚಿತ್ಯವನ್ನೂ ಪ್ರಶ್ನಿಸಿ ಕವಿಯನ್ನು ಟೀಕಿಸಿದರು. ಈ ಕವಿತೆಯ ಕತೆ ಹೀಗಿದೆ:

ಈ ಕತೆಯು ನಡೆದ ಸ್ಥಳ ಮಲಬಾರು. ಇದರ ಸಂದರ್ಭ 1921 ರಲ್ಲಾದ ಮಾಪಿಳ್ಳೆ ದಂಗೆಯನ್ನಡಗಿಸಿದ ಸಮಯ. ಆಗಿನ ಹಿಂದೂ ಮುಸ್ಲಿಮ ಜಗಳದಲ್ಲಿ ಅನೇಕ ಕುಟುಂಬಗಳು ನಾಶವಾದುವು. ತನ್ನ ಬಂಧುಬಳಗವನ್ನೊಳಕೊಂಡ ಸಾವಿತ್ರಿಯೆಂಬ ಒಬ್ಬ ನಂಬೂದಿರಿ ಹೆಂಗಸು ತನ್ನ ಜೀವವನ್ನು ಕಾಪಾಡಿಕೊಳ್ಳಲು ಮನೆಬಿಟ್ಟು ಓಡಬೇಕಾಯಿತು, ಆಕೆಯು ಹೊಲೆಯ ಜಾತಿಯ ಚಾತನ್ ಎಂಬವನ ಗುಡಿಸಲಲ್ಲಿ ಆಶ್ರಯವನ್ನು ಪಡೆಯಬೇಕಾಗಿ ಬಂತು. ಆ ಹೊಲೆಯ ತರುಣನು ಆಕೆಗೆ ರಕ್ಷಣೆಯನ್ನು ಕೊಡುವನು. ಆಕೆಗೆ ಬೇರೆಲ್ಲಿಯೂ ಹೋಗಲು ಸಾಧ್ಯವಿಲ್ಲದುದರಿಂದ, ಅವರಿಬ್ಬರೂ ಅದೇ ಗುಡಿಸಲಲ್ಲಿ ವಾಸಮಾಡುವರು. ಅನ್ಯೋನ್ಯ ಕನಿಕರವು ಆಸಕ್ತಿಯಾಗಿ ಮಾರ್ಪಡುವುದು. ಆಸಕ್ತಿಯು ಮೆಚ್ಚುಗೆಯಾಗಿಯೂ ಮೆಚ್ಚುಗೆಯು ಅನ್ಯೋನ್ಯ ಒಡನಾಟವಾಗಿಯೂ ಬೆಳೆಯುವುದು. ಕೊನೆಗೆ ಅವರಿಬ್ಬರೂ ಗಂಡ ಹೆಂಡಿರಾಗಿರಲು ನಿಶ್ಚಯಿಸುವರು. ಹೀಗೆ ಈ ಕವಿಯು ಜಾತಿವ್ಯವಸ್ಥೆಯ ಉಚ್ಚತಮ ಜಾತಿಗೆ ಸೇರಿದ ನಂಬೂದಿರಿ ಸ್ತ್ರೀಯನ್ನು ನೀಚತಮಜಾತಿಗೆ ಸೇರಿದ ಹೊಲೆಯನೊಡನೆ ವಿವಾಹ ಸಂಬಂಧದಲ್ಲಿ ಒಟ್ಟುಗೂಡಿಸುವನು. ಜಾತಿ ಸಂಪ್ರದಾಯಗಳ ಎಲ್ಲಾ ಕೃತ್ರಿಮ ಬಂಧನಗಳಿಂದ ಬಿಡುಗಡೆಹೊಂದಿ ಚಾತನ್ ಮತ್ತು ಸಾವಿತ್ರಿಯರು ಇಲ್ಲಿ ಒಂದುಗೂಡುವರು.

'ದುರವಸ್ಥೆ'ಯ ರಚನೆಯವರೆಗೆ ಆಶಾನನು ಸಂಸ್ಕೃತ ಛಂದಸ್ಸುಗಳಲ್ಲಿ ಬರೆಯುತ್ತಿದ್ದನು. ಇಲ್ಲಿ ಆತನು ಸುಲಭವಾದ ಸರಳವಾದ ಮಲಯಾಳ ಛಂದಸ್ಸನ್ನು ಉಪಯೋಗಿಸಿರುವನು.

ಚಿಂತೆಯಲ್ಲಿದ್ದ ಸಾವಿತ್ರಿಯು ಪಾರಿವಾಳಗಳನ್ನು ನೋಡುತ್ತ ಸಮಾಧಾನ ಹೊಂದುವಳು.

'ನಾನೇಕೆ ದುಃಖಿಸಲಿ ? ನೋಡು !
ಈ ಪಾರಿವಾಳಗಳು ನಿಶ್ಚಿಂತೆಯಲಿ ಚರಿಸುತಿವೆ,
ಚಿಂತೆಯಿಂದವು ಮನವ ಗಾಯಗೊಳಿಸಿಕೊಳ್ಳುವುದಿಲ್ಲ.
ಅತ್ತು ಕಣ್ಣೀರ್ಗರೆದು ಕಣ್ಣರೆಪ್ಪೆಗಳ ಉರಿಸಿಕೊಳ್ಳುವುದಿಲ್ಲ.
ಎಂದಿಗೂ ಕಂಡರಿಯದ ಜಾತಿಮೂಲಕ ಬಂದ
ಭೇದದಿಂ ಬರುವ ಸಂಕಟ ಅವಕಿಲ್ಲ.'

ನೀತಿಬೋಧೆಯ ಅಂಶಗಳು ಎದ್ದು ಕಾಣುವ ಅನೇಕ ವಾಕ್ಯಗಳು ಈ ಕವಿತೆಯಲ್ಲಿವೆ. ಹಿಂದೂಶಾಸ್ತ್ರ ಪ್ರವರ್ತಕರನ್ನು ಕಂಡು ಈ ಎಚ್ಚರಿಕೆಯ ನುಡಿಗಳನ್ನು ಕವಿಯು ಹೇಳುತ್ತಾನೆ:

' ನಿಯಮಗಳನ್ನು ನೀವೇ ಬದಲಾಯಿಸಿಕೊಳ್ಳಿ.
ಇಲ್ಲದಿರೆ ಆ ನಿಯಮಗಳೆ ನಿಜಕು ನಿಮ್ಮನ್ನು ಬದಲಾಯಿಸುವವು.'

ಆಶಾನನ ಇತರ ಕೃತಿಗಳಂತಿಲ್ಲದೆ ಇದು ಅವಸರದಲ್ಲಿ ಬರೆದಿರುವಂತೆ ತೋರುವುದು. ಅದರ ಮುನ್ನುಡಿಯಿಂದಲೇ ತಿಳಿದುಬರುವಂತೆ ಆಶಾನನೇ ಈ ಕೃತಿಯ ಸಾಹಿತ್ಯ ಗುಣದ ಕುರಿತು ಸಂಶಯವನ್ನು ವ್ಯಕ್ತಪಡಿಸಿರುವನು. ಈ ಕೃತಿಯ ಮುಖ್ಯ ಉದ್ದೇಶ ಜಾತೀಯತೆಯ ದೋಷ ಅನ್ಯಾಯಗಳ ಕುರಿತು ಚಿಂತಿಸುವಂತೆ ಸಾಹಿತ್ಯ ಪ್ರೇಮಿಗಳ ಮನಸ್ಸನ್ನು ಪ್ರಚೋದಿಸುವುದು, ಈ ಉದ್ದೇಶವನ್ನು ಇದು ಬಹು ಚೆನ್ನಾಗಿ ಸಾಧಿಸಿತು. ಆಶಾನನೇ ಹೇಳುತ್ತಾನೆ, ' ನನ್ನ ಇತರ ಕವಿತೆಗಳೊಡನೆ ಹೋಲಿಸುವಾಗ ' ದುರವಸ್ಥೆ ' ಎಂಬ ಕೃತಿಯು ಕವಿತೆಯ ಸಾಮಾನ್ಯ ನಿಯಮಗಳನ್ನು ಪಾಲಿಸಿಲ್ಲ. ಇದಲ್ಲದೆ ಸಮಾಜ ಸುಧಾರಣೆ ಎಂಬ ವಿಶೇಷ ವಿವಾದಾಸ್ಪದವಾದ ವಿಷಯವನ್ನು ಇದು ವಸ್ತುವಾಗಿಸಿಕೊಂಡಿದೆ.' ಈ ಪ್ರಬಂಧದುದ್ದಕ್ಕೂ ಆತನು ತನ್ನ ಕೃತಿಯ ವಸ್ತುವಿನ ವಿರುದ್ಧ ತೀವ್ರಪ್ರತಿಕ್ರಿಯೆಗಳನ್ನು ಪ್ರತೀಕ್ಷಿಸುತ್ತಾನೆ. ತನ್ನ ಪ್ರಯತ್ನವು ಯಶಸ್ವಿಯಾದೀತೇ ? ಎಂದು ಸಂದೇಹಿಸುತ್ತಾನೆ. ಹೇಗಿದ್ದರೂ ತನ್ನ ಕವಿತೆಯ ಉದ್ದೇಶವು ಶ್ಲಾಘನೀಯವಾದುದೆಂಬ, ಉದಾತ್ತ ಭಾವನೆಗಳಿಂದ ಪ್ರಚೋದಿತವಾದುದೆಂಬ ಯೋಚನೆಯಿಂದ ಸಮಾಧಾನ ಹೊಂದುತ್ತಾನೆ.

ಕಥಾನಾಯಕಿಯಾದ ಸಾವಿತ್ರಿಯು ತನ್ನಿಂದ ನಿಯಂತ್ರಿಸಲಾಗದ ಸಂದರ್ಭ ಸನ್ನಿವೇಶಗಳ ಕಾರಣದಿಂದ ಕೀಳುಜಾತಿಯವನ ಸಂಪರ್ಕವನ್ನು ಪಡೆಯಬೇಕಾಗಿ ಬಂದ ವಿಷಯವಿರುವುದರಿಂದ ಕಥಾವಸ್ತುವು ದುರ್ಬಲವಾಗಿ ತೋರುವುದು. ಈ ಕಥಾಸಾಧನದ ಕುರಿತಾಗಿ ಆಶಾನನು ತನ್ನ ಎಂದಿನ ಹಿಡಿತವನ್ನು ಇಲ್ಲಿ ತೋರಿಸಿಲ್ಲ. ಅಲ್ಲಲ್ಲಿ ಕೆಲ ಸುಂದರ ವರ್ಣನೆಗಳು ಬಂದರೂ, ಅನಾವಶ್ಯಕವಾದ ಮಾತುಗಳನ್ನು ಆತನು ಅತಿಯಾಗಿ ಉಪಯೋಗಿಸಿರುವಂತೆ ತೋರುತ್ತದೆ. ಉಪದೇಶಿಸಲಿಕ್ಕಾಗಿಯೇ ಕತೆಯನ್ನು ರಚಿಸಿದಂತಿದೆ. ಕೆಲ ವಿಮರ್ಶಕರ ಅಭಿಪ್ರಾಯದಂತೆ ಆ ಕಾದಲಕಾದಲೆಯರ ಸ್ನೇಹವನ್ನೇ ಕವಿತೆಯಲ್ಲಿ ಸಮರ್ಪಕವಾಗಿ ಬೆಳೆಸಿಲ್ಲ. ಇವೆಲ್ಲಾ ನ್ಯೂನತೆಗಳಿದ್ದರೂ 'ದುರವಸ್ಥೆ 'ಯು ಒಂದು ಪ್ರಮುಖಸಾಧನೆಯನ್ನು ಸಿದ್ಧಿಸಿದೆ. ಸಾಮಾಜಿಕ ಕ್ರಾಂತಿಯ ಬೀಜವನ್ನು ಈ ಕವಿತೆಯು ಬಿತ್ತಿದೆ. ಜಾತಿಮೂಲಕವಾದ ಭೇದಗಳು ಕೃತಕವೆಂಬ, ಮಾನವಸಹಜವಲ್ಲವೆಂಬ ಅಭಿಪ್ರಾಯವನ್ನು ಪ್ರಚಾರಗೊಳಿಸಿದೆ.

## ಚಂಡಾಲ ಭಿಕ್ಷುಕಿ

' ಚಂಡಾಲಭಿಕ್ಷುಕಿ ' ಎಂಬ ಕವಿತೆಯು ' ದುರವಸ್ಥೆ 'ಯನ್ನು ಹಿಂಬಾಲಿಸಿ ಬಂದ ಕವಿತೆ. ಇವೆರಡರ ಗುರಿಯೂ ಜಾತಿಭೇದಗಳನ್ನು ನಿರ್ಮೂಲಗೊಳಿಸುವುದು. ಹಾಗಿದ್ದರೂ ಇವುಗಳಲ್ಲಿ ಭೇದವಿದೆ. ಇಲ್ಲಿ ಕೀಳುಜಾತಿಗೆ ಸೇರಿದ ಪಾತ್ರ ಹೆಂಗುಸು. ಇದರ ಕವಿತಾರಚನೆಯಲ್ಲಿ ಇತರ ವ್ಯತ್ಯಾಸಗಳೂ ಇವೆ. ಇದರ ಕತೆಯ ಪರಿಚಯವನ್ನು ಮಾಡಿಕೊಂಡ ಮೇಲೆಯೇ ಕೃತಿರಚನಾತಂತ್ರದಲ್ಲಿನ ವ್ಯತ್ಯಾಸವನ್ನು ಪರೀಕ್ಷಿಸಲು ಸಾಧ್ಯ.

ಈ ಕತೆಯು ಚೌಕಟ್ಟು ಬೌದ್ಧಸಾಹಿತ್ಯದಿಂದ ಆಯ್ದುಕೊಂಡುದು. ಬುದ್ಧನ ಶಿಷ್ಯರಲ್ಲೊಬ್ಬನಾದ ಆನಂದನು ಸ್ವಲ್ಪ ಸಮಯ ಬಿಸಿಲಲ್ಲಿ ಸಂಚರಿಸಿ ಮಧ್ಯಾಹ್ನ ಕಾಲದಲ್ಲಿ ಒಂದು ದೊಡ್ಡ ಆಲದಮರದ ನೆರಳಿಗೆ ಬರುವನು. ಅದೇ ಸಮಯ ಅಲ್ಲೇ ಇದ್ದ ಬಾವಿಯಿಂದ ನೀರು ಸೇದಲು ಚಂಡಾಲಹೆಂಗುಸೊಬ್ಬಳು ಬರುವಳು. ಬಾಯಾರಿದ ಆನಂದನು ಆಕೆಯೊಡನೆ ಕುಡಿಯಲು ನೀರನ್ನು ಕೇಳುವನು. ಆಕೆಯು ಕೀಳುಜಾತಿಯವಳಾದುದರಿಂದ ಆತನು ತನ್ನಿಂದ ನೀರನ್ನು ತೆಗೆದುಕೊಳ್ಳುವನೋ ಎಂದು ಅವಳಿಗೆ ಸಂದೇಹ. ಆದರೆ ಇದನ್ನು ನಿಶ್ಚಯಿಸಬೇಕಾದವನು ಭಿಕ್ಷು. ಆತನೇ ನೀರನ್ನು ಕೇಳಿದುದರಿಂದ ಅವಳು ಕೊಡಬೇಕಾಗಿದೆ. ಆತನು ತೃಪ್ತಿಯಿಂದ ನೀರನ್ನು ಕುಡಿಯುತ್ತಾನೆ. ಭಿಕ್ಷುವಿನೊಡನೆ ಅನಿರೀಕ್ಷಿತವಾದ ಈ ಸಂಪರ್ಕವು ಆಕೆಯ ಮನಸ್ಸಿನಲ್ಲಿ ಹೊಸ ಭಾವವನ್ನು ಹುಟ್ಟಿಸುತ್ತದೆ. ಆಕೆಯ ಹೃದಯವನ್ನು ಈ ಹೊಸಬ ಆಕರ್ಷಿಸಿದ್ದ. ಆಕೆ ಆ ರಾತ್ರಿ ನಿದ್ದೆ ಇಲ್ಲದೆ ಕಳೆದು ಮರುದಿನ ಬೆಳಿಗ್ಗೆ ಬುದ್ಧವಿಹಾರಕ್ಕೆ ಹೋಗುತ್ತಾಳೆ. ಆಕೆಯ ಪರಿಶುದ್ಧ ಪ್ರೇಮವನ್ನು ತಿಳಿದು ಬುದ್ಧನು ಆಕೆಯನ್ನು ತನ್ನ ವಿಹಾರದಲ್ಲಿ ಶಿಷ್ಯಳಾಗಿ ಸ್ವೀಕರಿಸುತ್ತಾನೆ. ಇದು ಮೇಲುಜಾತಿಯ ಜನರಲ್ಲಿ ಅಸಮಾಧಾನವನ್ನುಂಟುಮಾಡುವುದು. ಅವರು ಅರಸನೊಡನೆ ತಮ್ಮ ಅಸಮಾಧಾನ ವನ್ನು ಹೇಳಿಕೊಳ್ಳುವರು. ಅರಸನೇ ಈ ವಿಷಯದಲ್ಲಿ ಬುದ್ಧನೊಡನೆ ಮಾತನಾಡಲು ಸ್ವತಃ ವಿಹಾರವನ್ನು ಸಂದರ್ಶಿಸುವನು. ಬುದ್ಧನು ಜಾತಿವ್ಯವಸ್ಥೆಯ ಅರ್ಥ ರಾಹಿತ್ಯವನ್ನೂ ಅದರಿಂದ ಮಾನವಸಮಾಜಕ್ಕಾದ ಹಾನಿಯನ್ನೂ ಅರಸನಿಗೆ ಒಪ್ಪಿಗೆ ಯಾಗುವಂತೆ ತಿಳಿಯಹೇಳುವನು. ಅರಸನ ಅಭಿಪ್ರಾಯವು ಬದಲಾಗುವುದು. ಅರಸನಲ್ಲಿಗೆ ದೂರನ್ನು ಹೊತ್ತವರು ನಿರಾಶರಾಗುವರು. ಬೌದ್ಧಮತದಲ್ಲಿ ಶಿಷ್ಯೆಯಾಗಿ ಆಕೆಯನ್ನು ಸೇರಿಸಿಕೊಳ್ಳುವುದರಲ್ಲಿದ್ದ ಸಮಸ್ಯೆಯು ಕಷ್ಟವಿಲ್ಲದೆ ತೀರುವುದಾದರೂ, ಭಿಕ್ಷುವಿನೊಡನೆ ಆಕೆಗೆ ಉಂಟಾದ ಪ್ರೇಮದ ಸಮಸ್ಯೆಯನ್ನು ತೀರಿಸಲಿಕ್ಕೆ ಇಲ್ಲಿ ಕೈಹಾಕಲಿಲ್ಲ. ಬಹುಶಃ ಈ ಹೊಸ ಸನ್ನಿವೇಶದಲ್ಲಿ ಆ ಸಮಸ್ಯೆಯು ಏಳಲೇ ಇಲ್ಲವೆಂದು ತೋರುತ್ತದೆ.

ಈ ವಸ್ತುವನ್ನು ಒಂದು ಸುಂದರ ಕವಿತಾರಚನೆಗೆ ಕುಮಾರನ್ ಆಶಾನನು ಉಪಯೋಗಿಸಿದ್ದಾನೆ. ಈ ಕವಿತೆಯು ಕೆಲವು ಬಹು ಸುಂದರ ವರ್ಣನೆಗಳನ್ನೊಳ ಗೊಂಡಿದೆ. ಭಿಕ್ಷುವು ನೀರು ಕುಡಿಯಲಿಕ್ಕಾಗಿ ಬೊಗಸೆಯನ್ನೊಡ್ಡುವಾಗ ಚಂಡಾಲ ಹೆಂಗುಸು ಹೇಗೆ ತೋರುತ್ತಾಳೆ?

'ತನ್ನ ಮೇಘಶ್ಯಾಮಲ ತಲೆಗೂದಲನು, ಮೊಗವನು
ಮುಚ್ಚುವಂತಿದ್ದ ಸೀರೆಯ ಸೆರಗನು ಸರಿಸಿಕೊಂಡು
ಕಣ್ಣಿನಲಿ ಮೋಹಕತೆ ಸೂಸಿ ನಿಂತಳು ಆಕೆ.
ತುಂಬಿಯ ಸ್ಪರ್ಶಕ್ಕೆ ಎಚ್ಚೆತ್ತ ಚೆಂಗುಲಾಬಿಯಂತೆ
ಅವಳ ಸುಂದರ ಮುಖದಲ್ಲಿ ಅಚ್ಚರಿಯಿಂದ
ತುಂಬಿದ ಪ್ರಶಾಂತವಾದ ಮುಗುಳುನಗೆಯರಳಿತು.

ಮುಂಜಾವದ ಚಿಂಬೆಳಕಲಿ ಹೊಳೆಯಿತು ಆಕೆಯ ದೇಹ
ಕೆಂಪಗೆ ಚಿಗುರೆಲೆಗಳ ಕಾಂತಿಯು ವಿಾರುತ ಸೊಗಯಿಸಿತು.'

ರೆಕ್ಕೆಗಳು ತುಂಡಾದ ಮಿಂಚುಹುಳದಂತೆ ಆ ರಾತ್ರಿಯು ಕಳೆಯಿತು. ಆಕೆಯು ಬುದ್ಧನನ್ನು ನೋಡಿದಾಗ, ಆಕೆಗೆ ಯಾವ ಅನುಭವವಾಯಿತು ?

'' ಈಗ ತಾನೇ ಹಚ್ಚಿಟ್ಟ ದೀಪದ ಮುಂದಿನ ಪತಂಗದಂತೆ,
ಸೂರ್ಯನ ಮುಂದಿನ ಧರಿತ್ರಿಯಂತೆ,
ಪಾಂಡಿತ್ಯದ ರತ್ನದ ಮುಂದೆ ಪಾಮರನ ಅಸಂಬದ್ಧ ಪ್ರಲಾಪದಂತೆ,
ಅಚಲಬೋಧದ ಮುಂದೆ ಎಡವಿ ಬೀಳುತ್ತಿರುವ
ಸಂದೇಹದಂತೆ ''

ಆದರೆ ಭಗವಾನ್ ಬುದ್ಧನು ಆಕೆಯ ಮನದ ಕಾತರತೆಯನ್ನು ಹೋಗಲಾಡಿಸುವನು. ಈ ಕೆಳಗಿನ ಮಾತುಗಳಿಂದ ಆಕೆಯನ್ನು ಸ್ವೀಕರಿಸುವನು.

'' ಮಗಳೇ ! ನೀನು ಬಂದುದು ಒಳಿತಾಯ್ತು.
ನಾನದೆಲ್ಲವ ಬಲ್ಲೆ
ವತ್ಸೇ ! ಕನಿಕರದಿಂದ ನೀನು ನಿಷ್ಪಾಪಿ ಆನಂದನಿಗೆ
ತಣ್ಣೀರ ನೀಡಿ ಅವನ ದಾಹವನು ಹಿಂಗಿಸಿದೆ.
ಜನನ ಮರಣಗಳಿಗೆ ಹೇತುವಾದ ಆ ತೃಷ್ಣೆಯು
ಇನ್ನು ನಿನಗೆ ಉಂಟಾಗದಿರಲಿ.''

ಈ ಕವಿತೆಯ ಕೇಂದ್ರಭಾಗವು ಅರಸ ಮತ್ತು ಬುದ್ಧರೊಳಗೆ ನಡೆಯುವ ಜಾತಿಯ ಮೇಲಣ ಚರ್ಚೆ. ಕವಿಯ ಅಭಿಪ್ರಾಯಗಳು ಬುದ್ಧನ ಬಾಯಿಯಿಂದ ಶಕ್ತಿಯುತವಾಗಿ ಹೊರಹೊಮ್ಮುತ್ತವೆ.

'' ಹೇಳಿ, ನೋಡುವ
ದ್ವಿಜನು ಬಳ್ಳಿಯ ಕುಡಿಯಿಂದ ಬಂದಿಹನೆ ?
ಅಥವಾ ಮೇಘದಿಂದುದಿಸಿಹನೆ ?
ಶಮಿಯಿಂದ ಹುಟ್ಟುವ ಯಾಗಾಗ್ನಿಯಂತೆ
ಯೋಗದಿಂದ ಆತನು ಜನಿಸಿದ್ದಾನೆಯೇ ?
ಆ ಜಾತಿ ರಕ್ತದಲ್ಲದೆಯೇ ?
ಅಸ್ಥಿ ಮಜ್ಜೆಗಳಲ್ಲದೆಯೇ ?
ದ್ವಿಜನ ಬೀಜಪಿಂಡಕ್ಕೆ ಚಂಡಾಲಿಯ ಮೈಯು
ಬಂಜರಾಗುವುದೇ ?
ಪುಂಡ್ರವೋ, ಜನಿವಾರವೋ, ಶಿಖಾಷಂಡವೋ,
ಇವುಗಳಲಿ ಯಾವುದರಿಂದ ಜನ್ಮವನು ತಿಳಿಯಬಹುದು ?

ಅಕ್ಷರಬ್ರಹ್ಮರಾದ ದ್ವಿಜರು ಸ್ವತಹ
ಶಿಕ್ಷಣವಿಲ್ಲದೆ ವಿದ್ಯೆಯನು ತಿಳಿದಿರುವರೇನು ? ''

ಜಾತಿಯ ಅರ್ಥಶೂನ್ಯತೆಯನ್ನು ಇಷ್ಟು ಶಕ್ತಿಯುತವಾಗಿ ತಿಳಿಯಪಡಿಸಿದ ಕವಿಗಳು ಬಹುವಿರಳ. ಅಜ್ಞಾನಿಯ ಮನವು ಒಳಗೊಳಗೆ ಹೊಗೆಯುತ್ತಿರುವಾಗ ಹೊರಬರುವ ದ್ವೇಷದ ಹೊಗೆಯೇ ಜಾತಿ. ಜಾತಿಯ ಬಂಧನದಿಂದ ಮೇಲೆ ಬರಬೇಕೆಂದೂ ಪ್ರೇಮ ದಯೆಗಳನ್ನು ವರ್ಧಿಸಬೇಕೆಂದೂ ಜನರನ್ನುಪದೇಶಿಸುವಂತೆ ಬುದ್ಧನು ರಾಜನಿಗೆ ಸಲಹೆಕೊಡುವನು. ಈ ಪ್ರೇಮದ ಕುರಿತಾದ ಪದ್ಯ ದಯೆಯ ಬಗ್ಗೆ ಷೇಕ್ಸ್‌ಪಿಯರನು ಬರೆದ ಸುಪ್ರಸಿದ್ಧ ಪದ್ಯ (' Quality of Mercy ') ದಂತೆಯೇ ಅತಿ ಸುಂದರವಾಗಿದೆ.

'' ಲೋಕವು ಪ್ರೇಮದಿಂದ ಉದಯಿಸುವುದು.
ಪ್ರೇಮದಿಂದಭಿವೃದ್ಧಿ ಹೊಂದುವುದು.
ಪ್ರೇಮವೇ ಜಗತ್ತಿನ ಶಕ್ತಿ,
ಪ್ರೇಮವೇ ಎಲ್ಲರಿಗು ಆನಂದವನು ತರುವುದು.
ಶ್ರೀಯುತನೇ ! ಪ್ರೇಮವೇ ಜೀವಿತವು
ಪ್ರೇಮದ ವಿಪರ್ಯಾಸವೇ ಮರಣ.''

ಮಾತಂಗಿಯು ಆನಂದನನ್ನು ಮೆಚ್ಚಿದುದರಿಂದ ಆಕೆಯು ಉತ್ತಮ ಜೀವನದೆಡೆಗೆ ಒಯ್ಯಲ್ಪಡುವಳು. ಒಬ್ಬ ನಿರ್ದಿಷ್ಟ ವ್ಯಕ್ತಿಯ ಮೇಲಣ ಆಕೆಯ ಪ್ರೇಮವು ಶೀಘ್ರದಲ್ಲಿ ಉದಾತ್ತೀಕೃತವಾಗುವುದು. ಮೇಲುಜಾತಿಯ ಭಿಕ್ಷುವಿಗೆ ನೀರನ್ನು ಕೊಡಲು ಆಕೆಯು ಅರ್ಹಳಾದಳು ಎಂಬ ವಿಷಯವೇ ಆಕೆಯ ಜೀವನದಲ್ಲಿ ಹೊಸ ಅಧ್ಯಾಯವೊಂದನ್ನು ತೆರೆಯಿತು. ಇಲ್ಲಿ ಹೊಸ ಜೀವನದತ್ತ ಪ್ರೇರಣೆಯು ಬಂದುದು ಆಕೆಯಿಂದಲೇ. ಸಾವಿತ್ರಿಯ ವಿಷಯದಲ್ಲಾದರೆ ಹಾಗಲ್ಲ. ಆಕೆಯು ತನ್ನ ಹತೋಟಿಯಲ್ಲಿಲ್ಲದ ಪರಿಸ್ಥಿತಿಯಿಂದಾಗಿ ಹೊಲೆಯನ ಗುಡಿಸಲನ್ನು ಸೇರಿದಳು. ಮೇಲಿನ ತೋರಿಕೆಗೆ ಸಾವಿತ್ರಿಯು ಕೆಳಗೆ ಹೋದಂತೆಯೂ ಮಾತಂಗಿಯು ಮೇಲೇರಿದಂತೆಯೂ ಕಾಣುವುದು. ಇದು ಹೇಗಿದ್ದರೂ, ಪರಿಣಾಮ ಒಂದೇ. ಜಾತಿ ಸಂಪ್ರದಾಯಗಳು ಕುಸಿದುಬಿದ್ದುವು. ' ಚಂಡಾಲ ಭಿಕ್ಷುಕಿ ' ಎಂಬುದು ಕೃತಿರಚನೆಯ ದೃಷ್ಟಿಯಿಂದ ' ದುರವಸ್ಥೆ 'ಗಿಂತ ಮೇಲಾದುದು. ' ದುರವಸ್ಥೆ 'ಯು ಕವಿತಾಶಿಲ್ಪ ಬಲವಾಗಿದೆ. ಆದರೆ ಕೆಲಸ ನಾಜೂಕಲ್ಲ. ಕೆಲವು ಕಡೆ ಒರಟಾಗಿದೆ. ' ಚಂಡಾಲ ಭಿಕ್ಷುಕಿ 'ಯು ಹಾಗಲ್ಲ. ನಾಜೂಕು, ನಯ, ಇಲ್ಲಿವೆ. ಹಾಗೆಯೇ ಇದರಿಂದಾಗಿ ರಚನೆಯ ಬಲವೇನೂ ಕಮ್ಮಿಯಾಗಿಲ್ಲ.

ಆಶಾನನು ತನ್ನ ಇಡೀ ಜೀವನವನ್ನು ಹಿಂದುಳಿದ ವರ್ಗಗಳ ಶೋಚನೀಯ ಪರಿಸ್ಥಿತಿಗಳ ನಿವಾರಣೆಗಾಗಿ ಉಪಯೋಗಿಸಿದುದರಿಂದ, ಆತನದೇ ಆದ ಮುದ್ರೆ ಈ ಎರಡು ಕವಿತೆಗಳ ಮೇಲೆ ಬಿದ್ದಿವೆ. ' ಬಿದ್ದ ಹೂವು ', ' ನಳಿನಿ ', ' ಸೀತೆ ', ಈ

ಕವಿತೆಗಳನ್ನು ಇತರರಿಗೂ ಬರೆಯಲಾಗಬಹುದೆಂದು ಒಬ್ಬನು ಬರಿಯ ಊಹನೆಯನ್ನಾದರೂ ಮಾಡಬಹುದು. ಆದರೆ 'ದುರವಸ್ಥೆ' ಅಥವಾ 'ಚಂಡಾಲ ಭಿಕ್ಷುಕಿ' ಎಂಬ ಕವಿತೆಗಳನ್ನು ಇತರರು ಬರೆಯಬಹುದೆಂದು ಊಹಿಸುವುದೂ ಕಷ್ಟ. ಆತನು ಅಂತಹ ತೀವ್ರವಾದ ಸಾಮಾಜಿಕ ಪರಿಸ್ಥಿತಿಗೆ ಒಳಗಾಗಿದ್ದನು.

ಜೀವನದಲ್ಲಿ ಶ್ರೇಷ್ಠ ಸಮತಾವಾದಿಯೆಂದರೆ ಪ್ರೇಮ. ವಿವಾಹಸಂಬಂಧವನ್ನು ಬೆಳೆಸಲು ಅಭಿಲಾಷೆಯೇ ಸಾಮಾಜಿಕ ಸರಿಸಮತೆಯ ನಿಖರವಾದ ಪರೀಕ್ಷೆ. ಜಾತಿಯ ವಿಷಯದಲ್ಲಿ ಹಲ ಉದಾರ ಹೃದಯಿಗಳು ತಾವು ಅಷ್ಟೊಂದು ಮಡಿವಂತರಲ್ಲ ಎಂದು ಹೇಳುತ್ತಾರೆ. ಸಮಾಜದ ಅಸಮತೆಯನ್ನು ಹೋಗಲಾಡಿಸುವಂತಹ ಕೆಲ ಕಾರ್ಯಗಳನ್ನೂ ಮಾಡುತ್ತಾರೆ. ಆದರೆ ಈ ನಿಖರ ಪರೀಕ್ಷೆಗೆ ಸಿಕ್ಕಿಬಿದ್ದಾಗ ಅವರೆಲ್ಲಾ ಸೋಲುತ್ತಾರೆ. ಆಶಾನನು ಈ ಸಮಸ್ಯೆಯ ಮೂಲಕ್ಕೇ ಹೋಗಿ ಉತ್ತಮ ಸಮಸ್ಯೆ ಎಲ್ಲಿದೆ ಎಂಬುದನ್ನು ತೋರಿಸುತ್ತಾನೆ. ಒಟ್ಟಿಗೆ ಕುಳಿತುಕೊಳ್ಳುವುದು, ಒಂದೇ ಮೇಜಿನಲ್ಲಿ ಊಟಮಾಡುವುದು, ಇವೆಲ್ಲಾ ಸಣ್ಣ ವಿಷಯಗಳು. ಇವು ಆ ಸಮಸ್ಯೆಯ ಅಂಚನ್ನು ಮುಟ್ಟುವುವಷ್ಟೆ. ಆಶಾನನು ಜಾತಿಗಳನ್ನು ವಿವಾಹಬಂಧನದಲ್ಲಿ ಒಂದುಗೂಡಿಸಬಯಸಿದನು. ಇದು ಒರೇ ಬರವಣಿಗೆಯ ರೂಪದಲ್ಲಿದ್ದರೂ, ಆಗಿನ ಕಾಲದಲ್ಲಿ, ಕೇರಳದ ಸಾಮಾಜಿಕ, ಸಾಹಿತಿಕ ವಲಯಗಳಲ್ಲಿ ದೊಡ್ಡ ಗೊಂದಲವನ್ನೇ ಎಬ್ಬಿಸಿತು. ಇದು ಅನಿರೀಕ್ಷಿತವಲ್ಲ, ಇದೊಂದು ಉದ್ದೇಶಪೂರ್ವಕ ಹೋರಾಟ. ಕವಿಯಾಗಿ ಆಶಾನನನ್ನು ನಿರ್ಲಕ್ಷಿಸಲು ಸಾಧ್ಯವಿರಲಿಲ್ಲ. ಮುಸ್ಲಿಮರಿಂದಲೂ ಮೇಲುಜಾತಿಯ ಹಿಂದುಗಳಿಂದಲೂ ಬಂದ ಈ ಆಕ್ರಮಣವನ್ನು ಆಶಾನನು ಧೈರ್ಯದಿಂದ ಇದಿರಿಸಿದನು. ಮಾಪಿಳ್ಳೆ ದಂಗೆಯನ್ನು ಕವಿತೆಯ ಹಿನ್ನೆಲೆಯಾಗಿ ಉಪಯೋಗಿಸಿದುದರಿಂದ ಮುಸ್ಲಿಮರು ಕುಪಿತರಾದರು. ಆದರೆ ಈಗ ಪರಿಸ್ಥಿತಿ ಬದಲಾಗಿದೆ. ಸಾಮಾಜಿಕ ದೃಷ್ಟಿಯ ಈ ಬದಲಾವಣೆಗಳಿಗೆ ಆಶಾನನ ಕೊಡುಗೆ ಮಹತ್ವಪೂರ್ಣವಾದುದನ್ನು ಮರೆಯಲಾಗದು.

## 11. ಕಿರುಗವನಗಳು

ಹಿಂದೆ ಅದಾಗಲೇ ಪ್ರಸ್ತಾಪಿಸಿರುವ ಭಕ್ತಿಗೀತೆಗಳಲ್ಲದೆ ಆಶಾನನು ಕವಿತಾಗುಣಗಳಿರುವ ಕೆಲವು ಲಘುಭಾವಗೀತಗಳನ್ನೂ ರಚಿಸಿರುವನು. ಅವು 'ಪುಷ್ಪವಾಡಿ', 'ಮಣಿಮಾಲೆ' ಮತ್ತು 'ವನಮಾಲೆ'ಗಳೆಂಬ ಮೂರು ಸಂಕಲನಗಳಲ್ಲಿ ಪ್ರಕಟವಾಗಿವೆ. ಅವುಗಳಲ್ಲಿ ಮೊದಲನೆಯದನ್ನು ಆಶಾನನೇ ಸಂಗ್ರಹಿಸಿ ಪ್ರಕಟಿಸಿರುವನು. ಎರಡನೇ ಮೂರನೇ ಸಂಕಲನಗಳನ್ನು ಆತನು ತೀರಿಕೊಂಡ ಮೇಲೆ ಆತನ ಹೆಂಡತಿಯು

ಪ್ರಕಟಿಸಿದಳು. ಇವುಗಳಲ್ಲಿ ಕೆಲಕವಿತೆಗಳು ಕವಿಗೆ ಆಸಕ್ತಿ ಇದ್ದ ಜನರ ಸ್ವಾಗತ ಸತ್ಕಾರ, ಬೀಳ್ಕೊಳ್ಳುವಿಕೆ, ಮರಣ ಮೊದಲಾದ ವಿಶೇಷ ಸಂದರ್ಭಗಳಿಗಾಗಿ ಬರೆದುದು. ಹಾಗಿದ್ದರೂ ಅವುಗಳಲ್ಲಿ ಒಂದು ವಿಶಿಷ್ಟವಾದ ಗುಣವಿದೆ. ಆತನ ಪ್ರಕೃತಿಪ್ರೇಮ, ನೀತಿಬೋಧೆ, ಜೀವನದ ವಿವಿಧ ಮುಖಗಳ ಚಿಂತನೆ, ಇವು ಕವಿಯ ಇತರ ಕವಿತೆಗಳ ವಸ್ತುಗಳಾಗಿವೆ. ಅವುಗಳಲ್ಲಿ ಕೆಲವು ವಸ್ತುವಿನಲ್ಲಿಯೂ, ರೂಪ ದಲ್ಲಿಯೂ ಮಲಯಾಳ ಪದ್ಯಸಾಹಿತ್ಯದ ರತ್ನಗಳಾಗಿವೆ.

ಆತನು ತನ್ನ ನೀಳ್ಗವನಗಳಲ್ಲಿ ಪ್ರೇಮಗಾಯಕನಾಗಿ ಕಂಡುಬಂದರೆ, ಕಿರು ಕವನಗಳಲ್ಲಿ ಆತನು ಸ್ವಾತಂತ್ರ್ಯಪ್ರೇಮವನ್ನು ಸಾರುವ ಕವಿಯಾಗಿ ಕಂಡುಬರುತ್ತಾನೆ. 'ಒರು ಉದ್ಬೋಧನಂ' (ಒಂದು ಉದ್ಬೋಧನ) ಎಂಬ ಸಾಂಕೇತಿಕ ಕವನವು ತನ್ನ ಜನರನ್ನು ಎದ್ದೇಳಲು, ಒಂದಾಗಲು, ಹೇಗಾದರೂ ಸ್ವಾತಂತ್ರ್ಯವನ್ನು ಪಡೆಯಲು ಉದ್ಬೋಧಿಸುತ್ತದೆ. 'ಏಕೆಂದರೆ ಸ್ವಾತಂತ್ರ್ಯವು ಅಮೃತ, ಸ್ವಾತಂತ್ರ್ಯವು ಜೀವನ, ಮದಾಂಧರ ಸೇವೆಯು ಮರಣಕ್ಕಿಂತ ಭಯಂಕರ.'

ಇನ್ನೂ ತೀವ್ರವಾದ ಕರೆಯು 'ಸಿಂಹನಾದ'ದಲ್ಲಿ ಅಡಕವಾಗಿದೆ. ಇದರಲ್ಲಿ ಕವಿಯು ತನ್ನ ಸಹಜೀವಿಗಳನ್ನು ಎಚ್ಚರಿಸುತ್ತಾನೆ. 'ಎದ್ದೇಳಿರಿ, ಎದ್ದೇಳಿರಿ, ನನ್ನ ಸೋದರರೇ ತ್ವರೆಮಾಡಿ. ನಿಮ್ಮ ರಣಭೇರಿಗಳನ್ನು ಬಡಿಯುತ್ತಾ ಜಾತಿಯೆಂಬ ರಾಕ್ಷಸನು ಎಲ್ಲೆಲ್ಲಿ ಅಡಿಯಿಡುತ್ತಾನೋ ಅಲ್ಲೆಲ್ಲಾ ಇದಿರಿಸಿ.'

'ಸ್ವಾತಂತ್ರ್ಯಗಾಥೆ'ಯು 1922 ರಲ್ಲಿ ಎರಮಲ್ಲೂರಿನಲ್ಲಿ ಜರುಗಿದ ಎಸ್. ಎನ್. ಡಿ. ಪಿ. ಯೋಗದ ಬಹುದೊಡ್ಡ ಸಭೆಯಲ್ಲಿ ಸಹಾಯಕ ದಳದವರಿಗೆ ಹಾಡಲು ರಚಿಸಿದ ಗೀತ. ಅನಂತರವೂ ಸಮಾಜದಲ್ಲಿದ್ದ ಲೋಪದೋಷಗಳನ್ನು ತೆಗೆದುಹಾಕುವ ಚಳವಳದ ಸಂಬಂಧದಲ್ಲಿ ಸೇರಿದ ಸಭೆಗಳಲ್ಲಿಯೂ ಈ ಗೀತವು ಹಾಡಲ್ಪಡುತ್ತಿತ್ತು. ಆಶಾನನು ಆಶಿಸಿದ್ದುದು ಬರಿಯ ರಾಜಕೀಯ ಸ್ವಾತಂತ್ರ್ಯವಲ್ಲ. ಸಾಮಾಜಿಕ ಸ್ವಾತಂತ್ರ್ಯ, ಆರ್ಥಿಕ ಸ್ವಾತಂತ್ರ್ಯ, ಜಾತಿವರ್ಗಗಳ ಸರಿಸಮಾನತೆ, ಇವುಗಳಿಗೂ ಆತನು ಅದೇ ರೀತಿಯ ಮಹತ್ವವನ್ನು ಕೊಟ್ಟಿದ್ದನು. ಈ ಗೀತದಲ್ಲಿ ಅವನು ನಮ್ಮ ಸಂಕೋಲೆ ಗಳನ್ನೂ ಕೈಕೋಳಗಳನ್ನೂ ಒಡೆದು ಕಳೆಯಬೇಕೆಂದು ಸ್ವಾತಂತ್ರ್ಯದೊಡೆಯನನ್ನು ಪ್ರಾರ್ಥಿಸಿಕೊಂಡಿರುವನು. ಈ ಗೀತೆಯ ಕೆಲಭಾಗಗಳನ್ನು ಕೆಳಗೆ ಕೊಡಲಾಗಿದೆ:

## ಸ್ವಾತಂತ್ರ್ಯ ಪ್ರಗಾಥ

ಸ್ವತಂತ್ರ ರಾಜ್ಯದ ಮಹಾ ಸಾಮ್ರಾಟನೇ! ತೇಜಸ್ಸಿನಿಂದ ಪವಿತ್ರಗೊಂಡ
ಸ್ವರ್ಣಸಿಂಹಾಸನವನಲಂಕರಿಸಿದ
ಕಾಂತಿಕಿರಣಗಳ ಹೊಮ್ಮಿಸುವ ರಾಜದಂಡವನು ಹಿಡಿದ,
ಓ ದೊರೆಯೆ!
ನಿನ್ನ ಆಳ್ವಿಕೆಗೆ ಜಯವಾಗಲಿ!
ಕಷ್ಟನಷ್ಟಗಳಿಗೆ ಹಿಂಜರಿಯದ ಜನಾಂಗಗಳು
ಎಂದೆಂದೂ ನಿನ್ನ ಶಿರುನಾಮವನು ಘೋಷಿಸುತ್ತಿರಲಿ!

ಆ ಘೋಷವು ಭುವನದಲ್ಲೆಲ್ಲಾ ಪ್ರತಿಧ್ವನಿಗೊಳ್ಳುತ್ತಿರಲಿ !
ಶಕ್ತಿಯುತವಾದ ನಿನ್ನ ಕರವಾಳದ ಚಲತ್ಪ್ರಭೆಯು
ನಮ್ಮ ಕಣ್ಣಿಗೆ ಹೊಳೆಯಲಿ !
ವಿಭೋ ! ಅದು ನಮ್ಮ ಕಾಲಸಂಕಲೆಯನು ತುಂಡರಿಸಲಿ !
ಈ ಕೈಕೋಳಗಳನು ತುಂಡರಿಸಿ ಬಿಸುಡಲಿ !
ಎಲ್ಲೆಲ್ಲಿಯೂ ಹಬ್ಬಿರುವ ಕಾರಿರುಳನು ಹೋಗಲಾಡಿಸಲು
ಮೋಕ್ಷಸ್ವಾತಂತ್ರ್ಯವಾಬ್ಧಿಯಲಿ ಮುಳುಗಿ ಹರ್ಷಿಸಿ ಉಜ್ಜೀವಿಸಲು
ಕೈಹಿಡಿದು ನಮ್ಮನು ಮೇಲಕ್ಕೆತ್ತು.
ಸತ್ಯವನು ಉಸಿರಾಡಿ, ಸಮತೆಯನು ಕಂಡು,
ಸ್ನೇಹಸಾರವನು ಮೈಗೂಡಿಸಿಕೊಂಡು ಕೃತಾರ್ಥರಾಗಿ
ಮಾನವರು ನಿಜವಾದ ಧರ್ಮದ ದಾರಿಯಲಿ ನಡೆಯಲಿ !
ಈ ಧರೆಯು ನಿಜವಾದ ಸ್ವರ್ಗವಾಗಿ ಪರಿಣಮಿಸಲಿ !

'ನಿಮಗೆ ಒಂದೇ ದೇಶ, ಒಂದೇ ಭಾಷೆ, ಒಂದೇ ದೇವರು, ಒಂದೇ ಸಮಾಜ' ಎಂಬುದು 'ಪ್ರಬೋಧ ನಕ್ಷತ್ರ' ಎಂಬ ಕವಿತೆಯ ಪಲ್ಲವಿ. ಸಮಾಜ ಸುಧಾರಕನಾದ ಸಹೋದರ ಅಯ್ಯಪ್ಪನ ಕೇಳಿಕೆಯನ್ನು ಮನ್ನಿಸಿ ಬರೆದ ಕವಿತೆಯಾದ 'ಪರಿವರ್ತನ' ದಲ್ಲಿ ಕ್ರಾಂತಿ ಧೋರಣೆಯು ಸುವ್ಯಕ್ತವಾಗಿದೆ.

ಕವಿಯ ಸೂಕ್ಷ್ಮವಾದ ಪ್ರಕೃತಿ ಪರಿಶೀಲನೆಯೂ ಸೌಂದರ್ಯ ಪ್ರೇಮವೂ ಆತನ ಕವಿತೆಗಳಾದ 'ಕಪೋತಪುಷ್ಪ', 'ಮಿನ್ನಾಮಿನುಗು' (ಮಿಂಚುಹುಳ), 'ತೋಟತ್ತಿಲೆ ಎಟ್ಟುಕಾಲಿ' (ತೋಟದಲ್ಲಿ ಜೇಡರಹುಳ) ಮತ್ತು 'ಭಾರತಮಯೂರ' ಗಳಲ್ಲಿ ಕಾಣಬರುತ್ತವೆ. ಈ ಕವಿತೆಗಳಲ್ಲಿ ಸೊಗಸಾದ ರೂಪಕಗಳಿವೆ. ಕೊನೆಯ ಕವಿತೆಯು ಭಾರತದ ನವಿಲಿನ ವೈಭವಯುತವಾದ ವರ್ಣನೆಯಿಂದ ಕೂಡಿದೆ. ಈ ಕವಿತೆಯ ಕೊನೆಯ ಪದ್ಯದಲ್ಲಿ ನವಿಲಿನಲ್ಲಿ ಒಬ್ಬ ಚಕ್ರವರ್ತಿಯ ರಾಜಲಾಂಛನವನ್ನು ಕವಿಯು ಕಾಣುತ್ತಾನೆ. ಶಾಶ್ವತವಾದ ಸ್ವರಾಜ್ಯವನ್ನು ಗಳಿಸಿದ ಭಾರತಮಾತೆಯು ಆ ನವಿಲಿನ ವಾಸಸ್ಥಳವೆಂದು ಕವಿಯು ಕವಿತೆಯನ್ನು ಕೊನೆಗಾಣಿಸುತ್ತಾನೆ. ಕವಿಯ ಕಲ್ಪನೆಯು ನನಸಾಗಿ ಬಂದುದು ನಿಜವಾಗಿಯೂ ದೊಡ್ಡ ಆಶ್ಚರ್ಯ ! ಈ ಕೃತಿಯನ್ನು (1923ರಲ್ಲಿ) ರಚಿಸಿ ನಾಲ್ಕು ದಶಕಗಳಾದ ಮೇಲೆ ನವಿಲನ್ನು ನಮ್ಮ ರಾಷ್ಟ್ರಪಕ್ಷಿಯಾಗಿ ಅಂಗೀಕರಿಸಿದುದು ಕವಿಯ ಭವಿಷ್ಯವಾಣಿಯು ನನಸಾದುದರ ಕುರುಹು.

'ಕಾವ್ಯಕಲೆ' ಅಥವಾ 'ಏಳಾಂ ಇಂದ್ರಿಯಂ' (ಏಳನೇ ಇಂದ್ರಿಯ) ಎಂಬ ಪದ್ಯದಲ್ಲಿ ನಿರೂಪಣೆಗೆ ಸಿಗದ ಕಾವ್ಯಕಲೆಯ ಸುಂದರ ವಿವರಣವಿದೆ. ಕಾವ್ಯದಧಿ ದೇವತೆಯನ್ನು ಕೊಂಡಾಡುವಲ್ಲಿ ಕಾವ್ಯಕಲೆಯ ಉದಾತ್ತತೆಯನ್ನು ಸೂಕ್ಷ್ಮತೆಯನ್ನು ಕವಿಯು ಬಹು ಸೊಗಸಾಗಿ ನಿರೂಪಿಸಿದ್ದಾನೆ. ಇದರಿಂದಾಗಿ ಈ ಕವಿತೆಯು ಹೆಚ್ಚಿನ ಯೋಗ್ಯತೆಯಿಂದ ಕೂಡಿದೆ.

ಈ ಕವಿಯ ಪ್ರಭಾವದ ಮುದ್ರೆ ಬಿದ್ದಿರುವ ಕವಿತೆಗಳು ಇನ್ನೂ ಅನೇಕವಿವೆ.

'ಸಿ. ಎ. ಸ್ಮಾರಕ', 'ವಂಡಿಂಡೆ ಪಾಟು' (ತುಂಬಿಯ ಹಾಡು), 'ಸಂಕೀರ್ತನ' 'ದಿವ್ಯಕೋಕಿಲ' (ಇದು ಹಿಂದೆಯೇ ಸೂಚಿತವಾಗಿದೆ) ಮತ್ತು 'ನಿಷ್ಕಪಟತೆಯೋಡು' (ಪ್ರಾಮಾಣಿಕತೆಯಿಂದ) ಎಂಬ ಕವಿತೆಗಳನ್ನು ಉದಾಹರಣೆಯಾಗಿ ಹೆಸರಿಸಬಹುದು.

# 12. ಇತರ ಮುಖಗಳು

ನಾವು ಕುಮಾರನ್ ಆಶಾನನ್ನು ಮುಖ್ಯವಾಗಿ ಕವಿಯಾಗಿಯೂ ಆಮೇಲೆ ಎಳವರ ಸಮಾಜೋದ್ಧಾರಕಾರ್ಯದ ವ್ಯವಸ್ಥಾಪಕನಾಗಿಯೂ ಇದುವರೆಗೆ ಪರಿಶೀಲಿಸಿದ್ದೇವೆ. ಆತನ ಜೀವನ ಮತ್ತು ವೃತ್ತಿಗಳಲ್ಲಿ ನಮ್ಮ ಲಕ್ಷ್ಯವನ್ನು ಸೆಳೆಯುತಕ್ಕ ಇತರ ಮುಖಗಳೂ ಇವೆ. ಈ ಅಧ್ಯಾಯದಲ್ಲಿ ನಾವು ಅವುಗಳಲ್ಲಿ ಕೆಲವನ್ನು ಪರಿಶೀಲಿಸೋಣ.

**ಸಂಪಾದಕನಾಗಿ**

ನಾಲ್ಕನೇ ಅಧ್ಯಾಯದಲ್ಲಿ ಆಶಾನನ ಸಮಾಜಸೇವೆಯ ಕುರಿತು ಹೇಳುವಾಗ 'ವಿವೇಕೋದಯ'ವೆಂಬ ಪತ್ರಿಕೆಯ ಪ್ರಕಟಣೆಯಲ್ಲಿ ಆಶಾನನ ಪಾತ್ರವನ್ನು ನಾವು ಸಂಗ್ರಹವಾಗಿ ತಿಳಿಸಿದ್ದೇವೆ. ಮಹಾಪುರುಷನಾದ ವಿವೇಕಾನಂದನ ಹೆಸರನ್ನು ನೆನಪಿಗೆ ತರುವ ಆ ಹೆಸರಿನ ಮಹತ್ವವನ್ನು ಹಿಂದೆಯೇ ಸೂಚಿಸಲಾಗಿದೆ. ಒಂದು ವೇಳೆ ಹಾಗಿಲ್ಲದಿದ್ದರೂ ತನ್ನ ಪುಟಗಳಿಂದ ಇತರರಿಗೆ ವಿವೇಕವನ್ನು ತಿಳಿಯಪಡಿಸುವ ಆ ಸಂಚಿಕೆಗೆ 'ವಿವೇಕೋದಯ'ವೆಂಬ ಹೆಸರು ಅನ್ವರ್ಥವಾಗಿದೆ. 'ವಿವೇಕೋದಯ'ವು ಪ್ರಧಾನವಾಗಿ ಎಸ್. ಎನ್. ಡಿ. ಪಿ. ಯೋಗದ ವಿಷಯ ಸಮಾಚಾರಗಳನ್ನು ತಿಳಿಸುವ ಪತ್ರಿಕೆಯಾಗಿದ್ದರೂ, ಅದು ಒಂದು ಜಾತೀಯ ಪತ್ರಿಕೆಯಾಗದಂತೆ ನೋಡಿಕೊಳ್ಳುವಷ್ಟು ಆಶಾನನು ಜಾಗ್ರತೆ ವಹಿಸಿದನು. ಈ ಸಂಚಿಕೆಯಲ್ಲಿ ಪ್ರಕಟವಾದ ಸಾಹಿತಿಕ ಮತ್ತು ವಿವಿಧ ವಿಷಯಗಳನ್ನು ತಿಳಿಸುವ ಲೇಖನಗಳು ಎಲ್ಲಾ ಸಮಾಜಗಳ ವಿದ್ಯಾವಂತರನ್ನು ಆಕರ್ಷಿಸಿದುವು.

ವಿಶೇಷವಾಗಿ ಆಶಾನನ ಸಂಪಾದಕೀಯಗಳು ವಾಚಕವರ್ಗದ ಮನಸ್ಸನ್ನು ಸೆಳೆದುವು. ಅವುಗಳ ವಿಷಯಕ್ಕೂ ತರ್ಕಬದ್ಧವಾದ ಮನ ಒಪ್ಪಿಸುವ ನಿರೂಪಣೆಗೂ, ಸೊಗಸಾದ ಗದ್ಯಶೈಲಿಗೂ ಇವು ವಿಖ್ಯಾತವಾಗಿದೆ. ಇದರಲ್ಲಿ ಪ್ರಕಟವಾಗುತ್ತಿದ್ದ ಪ್ರಚಲಿತ ಪರಿಸ್ಥಿತಿ, ಘಟನೆಗಳ ನಿರ್ಭೀತ ವಿಮರ್ಶೆಯು ರಾಜ್ಯದ ಮುಖಂಡರ ಲಕ್ಷ್ಯವನ್ನು ಸೆಳೆದುವು. ಆ ಕಾಲದಲ್ಲಿ ಹಿಂದುಳಿದ ವರ್ಗಗಳಿಗೆ ಉದ್ಯೋಗ ದೊರಕುವ ಅವಕಾಶ ಕಮ್ಮಿ ಇತ್ತು. ಎಳವರಿಗೆ ಧರ್ಮಾರ್ಥ ಪ್ರಾಥಮಿಕ ಶಿಕ್ಷಣ ದೊರೆಯುತ್ತಿರಲಿಲ್ಲ. ಸರಕಾರಿ ಶಾಲೆಗಳ ಮೇಲೆ ಅನೇಕ ತರದ ನಿರ್ಬಂಧಗಳನ್ನು

ಹೇರಲಾಗಿತ್ತು. ಇವೆಲ್ಲವುಗಳ ಕುರಿತು ಆಶಾನನು ಬರೆಯುತ್ತಿದ್ದ ಶಕ್ತಿಯುತವಾದ ಸಂಪಾದಕೀಯಗಳನ್ನು ಈಗಲೂ ಹಿಂದಿನ ಪೀಳಿಗೆಯವರು ಉದ್ಧರಿಸುತ್ತಾರೆ.

ಎ. ಪಿ. ಮಾಧವರಾಯರು ದಿವಾನರಾಗಿದ್ದಾಗ ಶ್ರೀಮೂಲದ ಶಾಸನ ಸಭೆಯಲ್ಲಿ ಎಳವರಿಗೆ ಪ್ರಾತಿನಿಧ್ಯವು ದೊರೆಯಿತು. ಮಾಧವರಾಯರ ವಿಶಾಲಭಾವನೆಯೂ, ದೂರದೃಷ್ಟಿಯೂ ಇದಕ್ಕೆ ಕಾರಣವಾಗುವುದರ ಜೊತೆಗೆ ಪ್ರಾತಿನಿಧ್ಯಕ್ಕಾಗಿ ಆ ಸಮಾಜವು ಆಗಿಂದಾಗ ಸಲ್ಲಿಸುತ್ತಿದ್ದ ಬೇಡಿಕೆಗಳೂ ಕಾರಣವಾಗಿದ್ದುವು. ಮೇಲು ಜಾತಿಯ ಹಿಂದುಗಳಿಂದ ನಡೆಸಲಾಗುತ್ತಿದ್ದ ಕೆಲಪತ್ರಿಕೆಗಳಿಗೆ ಇದು ಸರಿ ತೋರಿರಲಿಲ್ಲ. ಈ ಸುಧಾರಣೆಯನ್ನು ಕುರಿತು 'ದಿ ಮದ್ರಾಸ ಮೇಲ್' ಪತ್ರಿಕೆಯು ಬರೆಯುವಾಗ ಎಳವರನ್ನು ಬ್ರಾಹ್ಮಣ ಜಾತಿಯ ಕೊನೆಯ ಮೆಟ್ಟಲಲ್ಲಿರುವವರನ್ನಾಗಿ ನಿರೂಪಿಸಿತ್ತು! 'ಮಲಬಾರ್ ಮೇಲ್' ಪತ್ರಿಕೆಯ ಮಧುರೆ ವರದಿಗಾರನೊಬ್ಬನು ಆ ಸಮಾಜದ ಸ್ಥಾನಮಾನಗಳನ್ನು ಮೇಲೇರಿಸಿದುದಕ್ಕೂ ಎಳವರಿಗೆ ನಂಬೂದಿರಿಗಳೊಡನೆಯೂ ಇತರ ಮೇಲು ಜಾತಿಯ ಹಿಂದುಗಳೊಡನೆಯೂ ಶಾಸನ ಸಭೆಯಲ್ಲಿ ಕುಳಿತುಕೊಳ್ಳುವ ಅವಕಾಶವನ್ನು ಕೊಟ್ಟುದಕ್ಕಾಗಿ ದಿವಾನನನ್ನು ಪ್ರಶಂಸೆಮಾಡಿದನು. ಇಂತಹ ಸಂದರ್ಭಗಳಲ್ಲಿ ಆಶಾನನು ತೋರಿದ ಪ್ರತಿಕ್ರಿಯೆಯು ಮನನೀಯವಾಗಿದೆ. 'ವಿವೇಕೋದಯ' ಸಂಚಿಕೆಯ ಆಶಾನನ ಸಂಪಾದಕೀಯದಿಂದ ಈ ವಿಷಯಕ್ಕೆ ಸಂಬಂಧಿಸಿದ ಭಾಗದ ಅಭಿಪ್ರಾಯವು ಇಲ್ಲಿ ಉದ್ಧರಿಸಲ್ಪಟ್ಟಿದೆ.

"ಭೂಲೋಕದ ದೇವತೆಗಳಾದ ನಂಬೂದಿರಿಗಳೊಡನೆ, ಅಷ್ಟು ಮಾತ್ರವೇಕೆ? ದೇವತೆಗಳ ರಾಜನಾದ ದೇವೇಂದ್ರನೊಡನೆಯೇ ಕುಳಿತುಕೊಳ್ಳುವುದನ್ನು ಸಮಾಜೋದ್ಧಾರವೆಂದು ತಿಳಿದುಕೊಳ್ಳುವಷ್ಟು ಮೂರ್ಖರು ಎಳವರಲ್ಲಿ ದೊರೆಯುವುದು ದುರ್ಲಭ. ತಮ್ಮ ಜೀವನದ ಸತ್ಯತೆಯನ್ನು ತಿಳಿದ ಎಳವರು ನಿಷ್ಪಕ್ಷಪಾತಿಯಾದ ದಿವಾನರಿಂದ ಹೆಚ್ಚಿನ ಸವಲತ್ತುಗಳನ್ನು ಇದಿರು ನೋಡುವರು." ಪ್ರಸಿದ್ಧ ಸಂಪಾದಕನ ವಿಡಂಬನೆ ಹಾಸೋಕ್ತಿಗಳನ್ನು ಮೆಚ್ಚಲು ಆ ಇಡೀ ಸಂಪಾದಕೀಯವನ್ನೇ ಓದಬೇಕು. ಹಿಂದುಳಿದವರು ಎಂಬ ಅಭಿಪ್ರಾಯವೇ ಆಶಾನನಿಗೆ ನರಿದೋರಿರಲಿಲ್ಲ. ಆತನು ತನ್ನನ್ನು ಯಾರಿಗಿಂತಲೂ ಅಲ್ಪನೆಂಬುದಾಗಿ ಪರಿಗಣಿಸಿರಲಿಲ್ಲ. ಈ ಆತ್ಮವಿಶ್ವಾಸವು ಆತನ ಬರವಣಿಗೆಗಳಲ್ಲಿ ಪ್ರತಿಬಿಂಬಿತವಾಗಿದೆ.

ಕುಮಾರನ್ ಆಶಾನನು ವಿವೇಕೋದಯವನ್ನು 1904 ರಲ್ಲಿ ಅದು ಆರಂಭವಾದಂದಿನಿಂದ ಹದಿನೈದು ವರ್ಷಗಳ ವರೆಗೆ ಅದರ ಸಂಪಾದಕನಾಗಿ ನಡೆಸಿಕೊಂಡು ಬಂದನು. ಅವನ ಮದುವೆಯಾದ ಒಂದು ವರ್ಷದ ಮೇಲೆ ಆತನು ಎಸ್.ಎನ್.ಡಿ.ಪಿ. ಯೋಗ ಮತ್ತು ವಿವೇಕೋದಯಗಳೊಡನೆ ತನಗಿದ್ದ ಔದ್ಯೋಗಿಕ ಸಂಬಂಧವನ್ನು ತ್ಯಜಿಸಿದನು. ಆದರೆ ಸೂಕ್ಷ್ಮಜ್ಞನಾದ ಶ್ರೀ ನಾರಾಯಣ ಗುರುವು ಆತನ ಸೇವೆಗಳನ್ನು ಮತ್ತು ಯೋಗ್ಯತೆಗಳನ್ನು ಇನ್ನೊಂದು ರಂಗದಲ್ಲಿ ಉಪಯೋಗಿಸಿಕೊಂಡನು.

ಆತನು ಆಶಾನನ್ನು ಆಲ್ವಾಯಿಯಲ್ಲಿದ್ದ ಅದ್ವೈತ ಆಶ್ರಮ ಮತ್ತು ಸಂಸ್ಕೃತ ಶಾಲೆಗಳ ಕಾರ್ಯದರ್ಶಿಯಾಗಿ ನಿಯಮಿಸಿದನು. ಇದು ನಡೆದುದು 1920 ರಲ್ಲಿ. ಆಶಾನನು ತನ್ನ ಕಾರ್ಯಸ್ಥಾನವನ್ನು ಆಲ್ವಾಯಿಗೆ ಬದಲಿಸಿ ಈ ಹೊಸ ಜವಾಬ್ದಾರಿ

ಯನ್ನು ವಹಿಸಿಕೊಂಡನು. ಆತನು ಇಲ್ಲಿರುವಾಗ ಚೆರಾಯಿ (ಇದು ಕೊಚ್ಚಿಯಲ್ಲಿದೆ)ಯ ಎಳವರು ತಾವು ವಿಜ್ಞಾನ ವರ್ಧಿನಿ ಎಂಬ ತಮ್ಮ ಸಂಘದ ವತಿಯಿಂದ 'ಪ್ರತಿಭೆ' ಎಂಬೊಂದು ಪತ್ರಿಕೆಯನ್ನು ಹೊರಡಿಸಲು ನಿಶ್ಚಯಿಸಿರುವುದಾಗಿಯೂ ಅದರ ಸಂಪಾದಕತ್ವವನ್ನು ಆಶಾನನು ವಹಿಸಿಕೊಳ್ಳಬೇಕೆಂದೂ ಆತನನ್ನು ಕೇಳಿಕೊಂಡರು. ಅದಕ್ಕೆ ಆಶಾನನು ಸಮ್ಮತಿಸಿದನು. ಆ ಪತ್ರಿಕೆಯ ಮುಖ್ಯೋದ್ದೇಶಗಳು ಪ್ರಚಲಿತ ಸಾಮಾಜಿಕ ಮತ್ತು ಆರ್ಥಿಕ ವಿಷಯ ವರ್ತಮಾನಗಳಲ್ಲಿ ಓದುಗರಿಗೆ ಸರಿಯಾದ ಅಭಿಪ್ರಾಯವನ್ನುಂಟುಮಾಡುವುದೂ ಸಾಹಿತ್ಯ ವಿಷಯಗಳನ್ನು ವಿವರಿಸುವುದೂ ಆಗಿದೆಯೆಂದು ಆ ಪತ್ರಿಕೆಯ ಮೊದಲ ಸಂಚಿಕೆಯ ಸಂಪಾದಕೀಯದಲ್ಲಿ ಆಶಾನನು ಸ್ಪಷ್ಟಪಡಿಸಿರುತ್ತಾನೆ ಆಶಾನನು ತನ್ನ ಲಘುಕವಿತೆಗಳಲ್ಲಿ ಕೆಲವನ್ನು 'ಪ್ರತಿಭೆ'ಯಲ್ಲಿ ಪ್ರಕಟಿಸಿದನು. ಅವುಗಳಲ್ಲಿ ಮುಖ್ಯವಾದುವು 'ದೀಪಾರ್ಪಣೆ', 'ಸಂಕೀರ್ತನೆ' ಮತ್ತು 'ಗುಣನಿಷ್ಠೆ' ಎಂಬ ಕವಿತೆಗಳು.

ಆಶಾನನು ಆ ಪತ್ರಿಕೆಯ ಎರಡು ಸಂಚಿಕೆಗಳಲ್ಲಿ ಸರಸ್ವತೀರಂಗ ಎಂಬ ಶೀರ್ಷಿಕೆಯ ಕೆಳಗೆ ಸಾಹಿತ್ಯ ವಿಮರ್ಶೆಯ ಕುರಿತಾದ ತನ್ನ ಅಭಿಪ್ರಾಯಗಳನ್ನು ವಿಶದವಾಗಿ ತಿಳಿಯಪಡಿಸುತ್ತಾನೆ. ಸಾಹಿತ್ಯ ಪತ್ರಿಕೆಗಳಿಗೆ ಪುಸ್ತಕ ವಿಮರ್ಶನದ ವಿಷಯದಲ್ಲಿ ಇದು ಮಾರ್ಗದರ್ಶಕವಾಗಿದೆ. ಒಳ್ಳೆಯ ಒಂದು ವಿಮರ್ಶೆಯು ಆಕರ್ಷಕವೂ ಬೋಧಕವೂ ಆಗಿದ್ದು ಸಂಪೂರ್ಣ ನಿಷ್ಪಕ್ಷಪಾತ ದೃಷ್ಟಿಯಿಂದ ಕೂಡಿರಬೇಕೆಂದು ಆತನು ಹೇಳಿದನು. ಸಾಹಿತ್ಯ ವಿಮರ್ಶೆಗೆ ಆ ಕವಿಯು ನೀಡಿದ ಕೊಡುಗೆಯತ್ತ ಈಗ ಗಮನಿಸುವ.

## ವಿಮರ್ಶಕನಾಗಿ

ಹೆಚ್ಚಿನ ಕವಿಗಳಲ್ಲಿ ವಿಮರ್ಶಾತ್ಮಕವಾದ ಮನಸ್ಸಿದ್ದರೂ ಎಲ್ಲಾ ಒಳ್ಳೆಯ ಕವಿಗಳೂ ಉತ್ತಮ ವಿಮರ್ಶಕರಲ್ಲ. ಸ್ವತಂತ್ರ ಕೃತಿರಚನಾ ಸಾಮರ್ಥ್ಯವಿರುವವರು ಇತರರ ಕೃತಿಗಳ ಕುರಿತು ವಿಮರ್ಶೆ ಬರೆಯುವುದನ್ನು ಅಷ್ಟಾಗಿ ಮೆಚ್ಚುವುದಿಲ್ಲ. ಕುಮಾರನ್ ಆಶಾನನು ಒಬ್ಬ ಮಹಾಕವಿ. ಒಬ್ಬ ನಿಷ್ಣಾತ ವಿಮರ್ಶಕ, ಸಂಪಾದಕನಾಗಿ, ಕೆಲಕೃತಿಗಳ ಸಾಹಿತ್ಯ ಮೌಲ್ಯವನ್ನು ನಿರ್ಣಯಿಸುವ ಸಂದರ್ಭಗಳು ಆತನಿಗೆ ಒದಗಿದ್ದುವು. ಆದುದರಿಂದ ಆತನು 'ವಿವೇಕೋದಯ'ದಲ್ಲಿ ಮತ್ತು 'ಪ್ರತಿಭೆ'ಯಲ್ಲಿ ಬರೆದು ಪ್ರಕಟಿಸಿದ ಕೆಲ ವಿಮರ್ಶೆ ವಿವರಣೆಗಳಿಂದ ಆತನ ವಿಮರ್ಶಾತ್ಮಕ ಸಾಮರ್ಥ್ಯವನ್ನು ಕಂಡುಕೊಳ್ಳಬಹುದು.

ಆಶಾನನು ಬರೆದ ವಿಚಾರಪೂರ್ಣವಾದ ವಿಮರ್ಶೆಗಳಲ್ಲಿ ವಲ್ಲತ್ತೋಳರ 'ಚಿತ್ರಯೋಗ,' ಉಳ್ಳೂರ್ ಪರಮೇಶ್ವರ ಅಯ್ಯರರ 'ಉಮಾಕೇರಳ' ಮತ್ತು ಪಂತಲಂ ಕೇರಳವರ್ಮರ 'ರುಕ್ಮಾಂಗದ ಚರಿತೆ' ಎಂಬ ಈ ಮೂರು ಮಹಾಕಾವ್ಯಗಳ ಮೇಲೆ ಬರೆದ ವಿಮರ್ಶೆಗಳು ವೈಶಿಷ್ಟ್ಯ ಪೂರ್ಣವಾಗಿವೆ. ಚಿತ್ರಯೋಗದ ವಿಮರ್ಶೆಯು ಕೇರಳ ಸಾಹಿತ್ಯ ರಂಗದಲ್ಲಿ ದೊಡ್ಡ ಕ್ಷೋಭೆಯನ್ನೇ ಎಬ್ಬಿಸಿತು. ಸಂಸ್ಕೃತ ಲಾಕ್ಷಣಿಕರಿಂದ ನಿಯಮಿತವಾದ ಕೆಲ ನಿಯಮಗಳನ್ನು ಪಾಲಿಸಿ

ನಿರ್ವಹಿಸಲಿಕ್ಕಾಗಿ ಮಾತ್ರ ಮಹಾ ಕಾವ್ಯವನ್ನು ರಚಿಸುವುದರ ಔಚಿತ್ಯವನ್ನು ಆಶಾನನು ಪ್ರಶ್ನಿಸಿದನು. ಸಮುದ್ರ, ಪರ್ವತ, ನಗರ, ಋತು, ಇತ್ಯಾದಿಗಳ ಕೆಲ ವರ್ಣನೆಗಳನ್ನು ಮಾಡಿಯೇ ತೀರಬೇಕೆಂಬ ಸಂಪ್ರದಾಯಕ್ಕಾಗಿ ಕಥೆಯನ್ನು ಯಾಕೆ ಬಲಿಕೊಡಬೇಕೆಂದು ಆತನು ಕೇಳುತ್ತಾನೆ. ಸಂಸ್ಕೃತ ಮಹಾ ಕಾವ್ಯಗಳ ತಂತ್ರದ ಅಂಧಾನುಕರಣೆಯನ್ನೂ ಇದಕ್ಕೆ ಕಾರಣವಾದ ಕವಿಯ ಸಾಂಪ್ರದಾಯಿಕ ನಿಲವನ್ನೂ ಆಶಾನನು ತೀವ್ರವಾಗಿ ಟೀಕಿಸಿದ್ದಾನೆ. ಸುಪ್ರಸಿದ್ಧ ಸಂಸ್ಕೃತ ಪದ್ಯ ಭಾಗಗಳನ್ನು ಪ್ರತಿಬಿಂಬಿಸುವ ವಲ್ಲತ್ತೋಳನ ಕಾವ್ಯದ ಕೆಲಭಾಗಗಳನ್ನೂ ಆತನು ಸಂಗ್ರಹವಾಗಿ ಉಲ್ಲೇಖಿಸಿದ್ದಾನೆ.

ವಲ್ಲತ್ತೋಳನನ್ನು ಮತ್ತು ಆತನ ಅನುಯಾಯಿಗಳನ್ನು ಈ ವಿಮರ್ಶೆಯು ಪ್ರಚೋದಿಸಿತು. ವಲ್ಲತ್ತೋಳನೂ ಆಶಾನನೂ ಪ್ರಮುಖ ಕವಿಗಳೆಂದು ಆಗ ಪರಿಗಣಿತ ರಾಗಿದ್ದರು. 'ಕವಿಗೆ ಕವಿ ಮುನಿವಂ' ಎಂಬ ಕವಿಸಹಜವಾದ ಅಸೂಯೆಯಿಂದ ಈ ಇಬ್ಬರು ಕವಿಗಳು ವಿಮುಕ್ತರಾಗಿದ್ದರೋ ಎಂದು ಹೇಳುವುದು ಕಷ್ಟ. ಆ ಕಾಲದಲ್ಲಿ ಜಾತಿಭೇದಗಳೂ ಸಾಹಿತ್ಯದ ಮೇಲೆ ಪ್ರಭಾವವನ್ನು ಬೀರುತ್ತಿದ್ದುವು. ಹೀಗೆ ಕೆಲವರು ಈ ವಿಮರ್ಶೆಯನ್ನು ಒಬ್ಬ ಎಳವ ಕವಿಯು ನಾಯರ ಕವಿಯನ್ನು ಟೀಕಿಸುವ ರೀತಿಯಲ್ಲಿ ಅಪಾರ್ಥಮಾಡಿಕೊಂಡರು. ಸ್ವಲ್ಪ ಸಮಯದಲ್ಲಿಯೇ ವಿ. ಉನ್ನಿ ಕೃಷ್ಣನ್ ನಾಯರ್ ಎಂಬ ಇನ್ನೊಬ್ಬ ಕವಿಯು ವಲ್ಲತ್ತೋಳನ ಪರವಾಗಿ ಆ ವಿಮರ್ಶೆಗೆ ಉತ್ತರವನ್ನು ಬರೆದನು. ಇದು ಆಶಾನನಿಗೆ ತನ್ನ ನಿಲವನ್ನು ಸಮರ್ಥಿಸುತ್ತ 'ಚಿತ್ರಯೋಗ'ದ ಕೂಲಂಕಷ ವಿಮರ್ಶೆಯನ್ನು ಬರೆಯುವ ಅವಕಾಶವನ್ನು ಕೊಟ್ಟಿತು. ಇದು ಸಾಹಿತ್ಯವಿಮರ್ಶೆಯಲ್ಲಿ ಯುಕ್ತಿಯುಕ್ತವಾದ ವೀರ್ಯವತ್ತಾದ ಪ್ರಬಂಧ. ಇದನ್ನು ಓದುವಾಗ ಆಶಾನನ ಸೂಕ್ಷ್ಮಮತಿ, ಸುಸಂಸ್ಕೃತವಾದ ಅಭಿರುಚಿ ಮತ್ತು ಆಳವಾದ ವಿದ್ವತ್ತು, ಇವುಗಳ ಅರಿವಾಗುವುದು.

ಒಂದು ಕೃತಿಯ ಪ್ರಾಮಾಣಿಕ ವಿಮರ್ಶೆಯು ಜಾತೀಯ ಭಾವನೆಗಳನ್ನು ಪ್ರಚೋದಿಸಿದುದನ್ನು ನೋಡಿ ಆಶಾನನಿಗೆ ವ್ಯಸನವಾಯಿತು. ಕೆಲ ಪತ್ರಿಕೆಗಳು ಆಶಾನನನ್ನು ಶಿಕ್ಷಿಸಲು ಅಶ್ಲೀಲ ಭಾಷೆಯನ್ನೂ ಉಪಯೋಗಿಸಿದುವು. ಇದು ಆತನನ್ನು ಕೆಣಕಿದರೂ, ತನ್ನ ಸಂಯಮವನ್ನು ಕಳಕೊಳ್ಳದೆ ಪ್ರಾಮಾಣಿಕವಾಗಿಯೇ ಆತನು ಉತ್ತರವನ್ನು ಬರೆದನು. ಉತ್ತರ ರೂಪದ ಈ ದೀರ್ಘಲೇಖನವು ಈ ಕೆಳಗಿನ ಮಾತುಗಳಿಂದ ಕೊನೆಗೊಳ್ಳುವುದು. "ಪ್ರಾಮಾಣಿಕ ಅಭಿಪ್ರಾಯಗಳನ್ನು ತಿಳಿಯ ಪಡಿಸುವವರ ಜಾತಿ ವೃತ್ತಿಗಳನ್ನು ತೆಗಳಿ ಅಶ್ಲೀಲ ಮಾತುಗಳನ್ನು ಪ್ರಕಟಿಸುತ್ತಾ, ಸಾಹಿತ್ಯವಿಮರ್ಶೆಯ ನೋಗಿನಿಂದ ಜನತೆಯನ್ನು ಮರುಳುಗೊಳಿಸಲು ಪ್ರಯತ್ನಿಸುವ ಈ ಪತ್ರಿಕೆಗಳು ತಮ್ಮ ಕಾರ್ಯಕ್ಕೆ ತಾವೇ ನಾಚಿಕೊಳ್ಳದಿದ್ದರೆ ನಾವು ಅವುಗಳ ಬಗ್ಗೆ ವ್ಯಸನಪಡಬೇಕಷ್ಟೆ. ಇದಲ್ಲದೆ ನಮಗೆ ಬೇರೇನೂ ಮಾಡಲು ಸಾಧ್ಯವಿಲ್ಲ."

ಉಳಿದೆರಡು ಮಹಾಕಾವ್ಯಗಳ ವಿಮರ್ಶೆಗಳು ಹೆಚ್ಚು ಅನುಕೂಲವಾದ ವಿಮರ್ಶೆಗಳು. ಹಾಗಿದ್ದರೂ ಆಧುನಿಕ ಕವಿಗಳು ಹಳಸಿದ ಪದ್ಯ ಶೈಲಿಗಳನ್ನು ಏಕೆ ಅನುಕರಿಸುತ್ತಾರೆಂದೂ, ಸಾಂಪ್ರದಾಯಿಕ ಕಾವ್ಯಗಳನ್ನು ಬರೆಯಲು ಏಕೆ ಆಶಿಸು

ತ್ತಾರೆಂದೂ ಆಶಾನನು ಆಶ್ಚರ್ಯಪಡುತ್ತಾನೆ. ಉಳ್ಳೂರನ ಮಹಾಕಾವ್ಯವಾದ 'ಉಮಾ ಕೇರಳ'ದ ಕೆಲ ಗುಣಗಳನ್ನು ಆಶಾನನು ಎತ್ತಿ ಹೇಳಿದ್ದಾನೆ.

ಈ ವಿಮರ್ಶೆಗಳ ಸಂದರ್ಭದಲ್ಲಿ ವಲ್ಲತ್ತೋಳನು ಸಂಪೂರ್ಣ ತಟಸ್ಥನಾಗಿರಲಿಲ್ಲ. ಅವನು ಆಗ 'ಆತ್ಮಪೋಷಣೆ' ಪತ್ರಿಕೆಯ ಸಂಪಾದಕನಾಗಿದ್ದ. ಆತನು ಆಶಾನನ ಶೋಕಗೀತವಾದ ಪ್ರರೋದನವನ್ನು ಕುರಿತು ಕಟುವಾದ ವಿಮರ್ಶೆಯನ್ನು ಪ್ರಕಟಿಸಿದ. ಇದಕ್ಕೆ ಒಡನೆಯೇ ಆಶಾನನಿಂದ ಉತ್ತರರೂಪವಾದ ಲೇಖನವು ಪ್ರಕಟವಾಯಿತು. ಇವೂ, ಇನ್ನೂ ಕೆಲ ಸಂಕ್ಷಿಪ್ತ ವಿಮರ್ಶೆಗಳೂ 'ನಿರೂಪಣೆಗಳು' ಎಂಬ ಶೀರ್ಷಿಕೆಯಲ್ಲಿ ಆಮೇಲೆ ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ. ಇದರಲ್ಲಿ ವಲ್ಲತ್ತೋಳನ 'ಬಂಧನಸ್ಥನಾಯ ಅನಿರುದ್ಧನ್' (ಬಂಧನಸ್ಥನಾದ ಅನಿರುದ್ಧ) ಎಂಬ ಕೃತಿಯ ಸಂಕ್ಷಿಪ್ತವಾದ ಮೆಚ್ಚುಗೆಯ ವಿಮರ್ಶೆಯೂ ಸೇರಿದೆ. ಸ್ವತಂತ್ರ ರಚನಾ ಸಾಮರ್ಥ್ಯವು ತನ್ನನ್ನು ಸ್ಪರ್ಧಿಸುವ ಕವಿಯೊಬ್ಬನಲ್ಲಿದ್ದರೂ ಅದನ್ನು ಆತನು ಮೆಚ್ಚಬಲ್ಲನು ಎನ್ನುವುದಕ್ಕೆ ಇದು ಉದಾಹರಣೆಯಾಗಿದೆ.

## ಭಾಷಾಂತರಕಾರನಾಗಿ

ಆಶಾನನು ಅನೇಕ ಭಾಷಾಂತರಗಳನ್ನೂ ಮಾಡಿದ್ದಾನೆ. ಇವುಗಳಲ್ಲಿ ಮುಖ್ಯವಾದುದು 'ಬುದ್ಧಚರಿತ.' ಇದು ಸರ್ ಎಡ್ವಿನ್ ಆರ್ನಾಲ್ಡನ 'ಲೈಟ್ ಆಫ್ ಏಶಿಯಾ'ದ ಪದ್ಯಾನುವಾದ. ಆಶಾನನು ಬುದ್ಧನ ಹಿರಿಮೆಯ ಜೀವನವನ್ನೂ ಬೌದ್ಧ ತತ್ವವನ್ನೂ ಬಹುವಾಗಿ ಮೆಚ್ಚಿದ್ದನು. ಆದುದರಿಂದ ಆತನಿಗೆ ಈ ಕೃತಿಯ ಸರಳವಾದ ಪದ್ಯಾನುವಾದವನ್ನು ಮಲಯಾಳದಲ್ಲಿ ಕೊಡಬೇಕೆಂದೆನಿಸಿತು. ಈ ಭಾಷಾಂತರವು 1903 ರಷ್ಟು ಹಿಂದೆ ಆರಂಭವಾಗಿದ್ದರೂ, ಅದರ ಮೊದಲನೆಯ ಸರ್ಗವು 1915 ರಲ್ಲಿ ಬರೆದು ಮುಗಿಯಿತಷ್ಟೆ. ಆಮೇಲೆ ದೀರ್ಘಕಾಲ ಆತನು ಇತರ ಹಲವು ಕಾರ್ಯಗಳಲ್ಲಿ ಮಗ್ನನಾಗಿದ್ದುದರಿಂದ ಆತನಿಗೆ ಈ ಪದ್ಯಭಾಷಾಂತರವನ್ನು ಮುಂದರಿಸಲಾಗಲಿಲ್ಲ. ಈ ಭಾಷಾಂತರದ ಭಾಗಗಳು ವಿವೇಕೋದಯದಲ್ಲಿ ಕ್ರಮವಾಗಿ ಪ್ರಕಟವಾದುವು. 1918ರಲ್ಲಿ ಹೆಚ್ಚಿನ ಭಾಷಾಂತರದ ಕೆಲಸವು ನಡೆಯಿತು. ಆದರೂ ಕೊನೆಯದಾದ ಐದನೇ ಭಾಗ 1924 ರಷ್ಟು ತಡವಾಗಿ ಪ್ರಕಟವಾಗಬೇಕಾಯಿತು. ಈ ಅನುವಾದದ ಕುರಿತು ಒಂದು ವಿಷಯ ವಿಶೇಷ ಗಮನಾರ್ಹವಾಗಿದೆ. ಆದಿಯ ಮೊದಲನೇ ಎರಡನೇ ಸರ್ಗಗಳು ಮೂಲಕ್ಕೆ ಸಂಪೂರ್ಣ ಸರಿಹೋಲುವ ಅನುವಾದಗಳಾಗಿವೆ. ಆ ಮೇಲಿನ ಸರ್ಗಗಳಲ್ಲಿ ಭಾವಾನುವಾದದತ್ತ ಕವಿಯ ಮನ ಒಲಿದಂತೆ ಕಾಣುತ್ತದೆ. ಮೂಲದ ಎಂಟು ಸರ್ಗಗಳಲ್ಲಿ ಆಶಾನನು ಅನುವಾದಿಸಿದುದು ಐದು ಮಾತ್ರ. ಇವುಗಳಲ್ಲಿ ಕೊನೆಯ ಸರ್ಗವು ಕವಿಯ ಕೊನೆಯ ಕೃತಿ. ಆಶಾನನು ಮೂಲಕ್ಕೆ ಸರಿಯಾಗಿ ಅನುವಾದಿಸಿದ್ದಾನೆ. ಅನುವಾದವು ಸಹಜವಾಗಿ ಸುಲಭವಾಗಿ ರಚಿತವಾಗಿದೆ.

ಬಾಲ ರಾಮಾಯಣವು ಕವಿಯ ಇನ್ನೊಂದು ಮುಖ್ಯ ಕೃತಿ. ಇದನ್ನು ವಾಲ್ಮೀಕಿ ರಾಮಾಯಣವನ್ನನುಸರಿಸಿ ಬರೆದುದರಿಂದ ಇದನ್ನು ಸೂಕ್ತ ಅನುವಾದವೆಂದು ಹೇಳಲಾಗದು. ಎಲ್ಲರೂ ಇದನ್ನು ಓದಿ ಪ್ರಯೋಜನವನ್ನು ಪಡೆದು ಸುಖ

ವನ್ನು ಹೊಂದಬಹುದಾಗಿದ್ದರೂ, ಇದನ್ನು ಆತನು ಬಾಲಕರ ಪ್ರಯೋಜನಕ್ಕಾಗಿಯೇ ರಚಿಸಿದ್ದಾನೆ. ಇದರ ಭಾಷೆಯು ಸರಳವಾಗಿ ಶೈಲಿಯು ಹಿತವಾಗಿ ಇದೆ. ಇದರಲ್ಲಿ ಉಪಯೋಗಿಸಿದ ಎಂಟಕ್ಷರಗಳ ಅನುಷ್ಟುಪ್ ಛಂದಸ್ಸು ಶ್ಲೋಕಗಳನ್ನು ಬಾಯಿ ಪಾಠ ಮಾಡಿಕೊಳ್ಳಲು ಸಹಾಯವಾಗಿದೆ. ಕವಿಗೆ ಇಡೀ ರಾಮಾಯಣವನ್ನು ಈ ರೀತಿ ರಚಿಸಬೇಕೆಂದು ಮನಸ್ಸಿತ್ತು. ಆದರೆ ಬಾಲಕಾಂಡ, ಅಯೋಧ್ಯಾಕಾಂಡ ಮತ್ತು ಅರಣ್ಯಕಾಂಡಗಳೆಂಬ ಮೂರು ಸರ್ಗಗಳನ್ನು ಮಾತ್ರ ಆತನಿಗೆ ಬರೆದು ಮುಗಿಸಲು ಸಾಧ್ಯವಾಯಿತು.

## ಮನಶ್ಶಕ್ತಿ

ಹಿಂದೆಯೇ ತಿಳಿಸಿರುವಂತೆ ಆಶಾನನು ಇಂಗ್ಲೀಷು ಪದ್ಯ ಸಾಹಿತ್ಯದಿಂದ ತಕ್ಕಷ್ಟು ಪ್ರಭಾವಿತನಾಗಿದ್ದನು. ಆತನು ಅನೇಕ ಇಂಗ್ಲೀಷು ಗದ್ಯಕೃತಿಗಳನ್ನೂ ಓದಿದ್ದನು. ಅವುಗಳನ್ನು ಮೆಚ್ಚಿದ್ದನು. ಅವುಗಳಲ್ಲೊಂದು ಜೇಮ್ಸ್ ಅಲ್ಲಾನ್ ಬರೆದ 'ಆ್ಯಸ್ ಎ ಮ್ಯಾನ್ ಥಿಂಕೆತ್' ಎಂಬುದು. ಇದನ್ನು ಆತನು ಮಲಯಾಳಕ್ಕೆ ಅನುವಾದಿಸಿ ವಿವೇಕೋದಯವೆಂಬ ಸಂಚಿಕೆಯಲ್ಲಿ 'ಮನಂಪೋಲೆ ಮಾಂಗಲ್ಯಂ' ಎಂಬ ಶೀರ್ಷಿಕೆಯೊಡನೆ ಅಧ್ಯಾಯ ಅಧ್ಯಾಯಗಳಾಗಿ ಪ್ರಕಟಿಸಿದನು. ಸ್ವಲ್ಪಕಾಲದ ಮೇಲೆ ಅದು ಪುಸ್ತಕರೂಪದಲ್ಲಿ ಪ್ರಕಟವಾದಾಗ ಅದರ ಶೀರ್ಷಿಕೆಯೂ 'ಮನಶ್ಶಕ್ತಿ' ಎಂಬುದಾಗಿ ಬದಲಾಯಿತು. ಮಾನವನ ಜಯಾಪಜಯಗಳಿಗೆ, ಉನ್ನತಿ ಅವನತಿಗಳಿಗೆ ಆತನೇ ಕಾರಣನೆಂಬುದೂ, ಆದುದರಿಂದ ಆತನು ತನ್ನನ್ನು ಸ್ವಪ್ರಯತ್ನದಿಂದ ಸುಧಾರಿಸಿಕೊಳ್ಳಲು ಪ್ರಯತ್ನಿಸಬೇಕೆಂಬುದೂ ಆ ಪುಸ್ತಕದ ಮೂಲ ತರ್ಕ ವಾದ. ಒಬ್ಬನ ವಂಶ ಸನ್ನಿವೇಶಗಳು ಹೇಗಿದ್ದರೂ, ಆತನು ಉನ್ನತವಾದ ಭಾವನೆಗಳಿಂದಲೂ, ಉದಾತ್ತವಾದ ಚರಿತೆಗಳಿಂದಲೂ ಮೇಲ್ಮೆಯನ್ನು ಹೊಂದಬಹುದು. ಜೀವನದ ಈ ತತ್ವದಿಂದ ಆಶಾನನು ಪ್ರಚೋದಿತನಾಗಿದ್ದನು. ಆ ಪುಸ್ತಕವನ್ನು ಓದಿದ ಓದುಗರೂ ತಕ್ಕಷ್ಟು ಪ್ರಯೋಜನ ಹೊಂದುವರೆಂಬುದು ಆತನ ಅಭಿಪ್ರಾಯವಾಗಿತ್ತು.

'ರಾಜಯೋಗ' ಎಂಬುದು ಪತಂಜಲಿಯ ಯೋಗಸೂತ್ರವನ್ನಾಧರಿಸಿ ಆ ವಿಷಯದ ಮೇಲೆ ಸ್ವಾಮಿ ವಿವೇಕಾನಂದರು ಬರೆದ ಕೃತಿಯ ಉತ್ತಮ ಮಲಯಾಳ ಭಾಷಾಂತರ. ಈ ಕೃತಿಯು ಅಕ್ಟೋಬರ್ 1908 ರಲ್ಲಿ ಸ್ವಾಮಿ ವಿವೇಕಾನಂದರಿಗೆ ಕೆಲ ಸಂಸ್ಕೃತ ಶ್ಲೋಕಗಳೊಡನೆ ಸಮರ್ಪಿತವಾಗಿದೆ.

ಇನ್ನೂ ಕೆಲ ಕೃತಿಗಳನ್ನೂ ಆಶಾನನು ಮಲಯಾಳಕ್ಕೆ ಭಾಷಾಂತರಿಸಿರುವನು. ಮೆಡೋಸ್ ಟೈಲರ್ ಬರೆದ 'ತಾರಾ' ಎಂಬ ಕಾದಂಬರಿಯನ್ನು ಆತನು 'ದೈವಿಕಮಾಯ ಪ್ರತೀಕಾರಂ' ಎಂಬ ಶಿರೋನಾಮೆಯಿಂದ ಅನುವಾದಿಸಿದನು. 'ಮೈತ್ರೇಯಿ' ಎಂಬ ಇಂಗ್ಲೀಷ್ ಕೃತಿಯು ಅದೇ ಶೀರ್ಷಿಕೆಯಿಂದ ಮಲಯಾಳಕ್ಕೆ ಆಶಾನನಿಂದ ಭಾಷಾಂತರವಾಯಿತು. ನಿಜವಾಗಿಯೂ ಆಶಾನನು ತನ್ನ ಬಾಲ್ಯ ದಿಂದಲೇ ಭಾಷಾಂತರ ಕಲೆಗೆ ಮನಸ್ಸು ಕೊಟ್ಟಿದ್ದನು. ಆತನು ವಿದ್ಯಾರ್ಥಿಯಾಗಿರು ವಾಗಲೇ ಮೇಘದೂತವನ್ನು ಮಲಯಾಳದಲ್ಲಿ ಅನುವಾದಿಸಲು ಪ್ರಯತ್ನಿಸಿದನು.

ಆದರೆ ಇದು ಕೊನೆಹೊಂದಲೇ ಇಲ್ಲ. ಮೈಸೂರಿನಲ್ಲಿರುವಾಗ ಆತನು ಶಂಕರಾಚಾರ್ಯರ ಸೌಂದರ್ಯ ಲಹರಿ ಮತ್ತು ಕೃಷ್ಣಮಿಶ್ರರ ಪ್ರಬೋಧ ಚಂದ್ರೋದಯಗಳನ್ನು ಮಲಯಾಳಕ್ಕೆ ಅನುವಾದಿಸಿದ್ದನು (5ನೇ ಅಧ್ಯಾಯವನ್ನು ನೋಡಿ).

## ಆಶಾನನ ಕಾರ್ಯಶಾಲೆ

ಆಶಾನನು ತನ್ನ ಸ್ವಂತರಚನೆಗಳನ್ನು ಹೇಗೆ ಮತ್ತು ಎಂತಹ ಪರಿಸ್ಥಿತಿಗಳಲ್ಲಿ ರೂಪಿಸಿದನು ಎಂಬುದನ್ನು ತಿಳಿಯುವುದು ಕುತೂಹಲದ ವಿಷಯ. ಪ್ರತಿಯೊಬ್ಬ ಕಲಾಗಾರನಿಗೂ ತನ್ನದೇ ಆದ ಕೆಲಸಮಾಡುವ ಒಂದು ರೀತಿ ಇದೆ. ಕಲಾಕೃತಿಯನ್ನು ತಿದ್ದುವ ನಿರ್ದೋಷವಾಗಿಸುವ ತನ್ನದೇ ಆದ ವಿಧಾನವೂ ಇದೆ. ಕೆಲವರು ಒಂದು ಕೃತಿಯನ್ನು ಒಮ್ಮೆ ಮುಗಿಸಿದ ಮೇಲೆ ತಿರುಗಿ ಅದನ್ನು ನೋಡಲು ಬಯಸುವುದಿಲ್ಲ. ಕೆಲವರಿಗೆ ಒಂದು ಕೃತಿಯನ್ನು ಬರೆದ ಮೇಲೆ ಅದನ್ನು ಅಸಂಖ್ಯಾತ ಬಾರಿ ತಿದ್ದಿದರೂ ತೃಪ್ತಿಯೇ ಇರುವುದಿಲ್ಲ. ಹೆಚ್ಚಿನ ಕಲಾವಿದರು ಈ ಎರಡು ಅತಿರೇಕ ವರ್ಗಗಳ ನಡುವಿನವರಾಗಿರುತ್ತಾರೆ. ಆದರೆ ಕಲಾವಿದನು ಒಂದು ಕೃತಿಯನ್ನು ರಚಿಸುವ ಮುಂಚೆ ಸಿದ್ಧತೆಯ ಎಷ್ಟೊಂದು ಮಾನಸಿಕ ಕೆಲಸವನ್ನು, ಯೋಜನೆಯನ್ನು ಮಾಡುತ್ತಾನೆ ಎಂಬುದನ್ನು ಸರಿಯಾಗಿ ಅಳೆಯಲು ಸಾಧ್ಯವಿಲ್ಲ.

ಆಶಾನನು ಮುಂದಾಲೋಚನೆಯಿಂದ ಯೋಜನೆಯನ್ನು ರೂಪಿಸುವಲ್ಲಿ ಪರಿಣತ. ಬರೆಯುವುದರ ಅಥವಾ ಮಾತನಾಡುವುದರ ಪೂರ್ವಚಿಂತನೆಯ ಪ್ರಮಾಣ ಆಯಾ ವ್ಯಕ್ತಿಯ ವ್ಯಕ್ತಿತ್ವದ ಮೇಲೆ ಬೆಳಕನ್ನು ಬೀರುವುದು. ಅನೇಕರು ಆಶಾನನನ್ನು ತನ್ನಲ್ಲಿ ತಾನೇ ಚಿಂತಿಸುವವನು ಎಂಬುದಾಗಿ ಪರಿಗಣಿಸುತ್ತಾರೆ. ಆತನು ತನ್ನ ಮನಸ್ಸಿನ ಒಳಮೂಲೆಗಳಲ್ಲಿ ಹೆಚ್ಚು ಚಿಂತಿಸುತ್ತಿದ್ದುದೇ ಇದಕ್ಕೆ ಕಾರಣ. ಲೇಖನಿಯನ್ನು ಕಾಗದದ ಮೇಲೆ ಇಡುವುದರ ಮೊದಲೇ ಆತನು ತಾನು ಬರೆಯಲಿರುವ ಕವಿತೆಯ ಪೂರ್ಣ ರಚನಾರೂಪವನ್ನು ಮನಸ್ಸಿನಲ್ಲಿ ಮಾಡಿಕೊಳ್ಳುತ್ತಿದ್ದನು. ಆ ರಚನೆಯನ್ನು ಬರೆದಿಡುವ ವರೆಗೆ ಅವನ ಮನಸ್ಸು ತುಡಿಯುತ್ತಿತ್ತು. ಕೃತಿರಚನೆಯಲ್ಲಿ ಈ ರೀತಿ ಆತನು ಮಗ್ನನಾಗಿದ್ದಾಗ ಆ ಕವಿಯ ವರ್ತನೆಯ ಕುರಿತು ಭಾನುಮತಿ ಅಮ್ಮನು ಬರೆದಿಟ್ಟ ನೆನಪಿನ ಹಾಳೆಗಳಿಂದ ತಿಳಿದು ಬರುವುದು.

"ಆಶಾನನು ತನ್ನೊಳಗೆ ತಾನೇ ಚಿಂತಿಸುವವನು ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳುವುದು ಅವಶ್ಯ. ಆತನು ಯಾವುದೇ ವಿಷಯದ ಕುರಿತಾದರೂ ಒಂದು ಕವಿತೆಯನ್ನು ಬರೆಯಲು ಆರಂಭಿಸುವ ಮೊದಲು ಆತನು ಕೆಲದಿನಗಳವರೆಗೆ ಚಿಂತನೆಯಲ್ಲಿ ಮುಳುಗಿರುವುದನ್ನು ನೀವು ಕಾಣುವಿರಿ. ಬರೆಯಬೇಕಾದ ಕೃತಿಯ ಕುರಿತು ದೀರ್ಘ ಟಿಪ್ಪಣಿಗಳನ್ನು ಬರೆದಿಟ್ಟುಕೊಳ್ಳುವ ಅಭ್ಯಾಸ ಆತನಲ್ಲಿರಲಿಲ್ಲ. ಪ್ರತಿಯೊಂದೂ ಮಾನಸಿಕವಾಗಿ ವ್ಯವಸ್ಥೆಗೊಂಡು ಯೋಜಿಸಲಾಗುತ್ತಿತ್ತು. ಕವಿತೆಯು ಹೇಗೆ ಆರಂಭಿಸಬೇಕು, ಹೇಗೆ ಅದನ್ನು ಬೆಳೆಸಬೇಕು, ಅದು ಹೇಗೆ ಕೊನೆಗೊಳ್ಳಬೇಕು ಎಂಬುದನ್ನೆಲ್ಲಾ ಕವಿತೆಯನ್ನು ಬರೆಯಲು ತೊಡಗುವ ಸಾಕಷ್ಟು ಮೊದಲೇ ನಿರ್ಧರಿಸಲಾಗುತ್ತಿತ್ತು. ಕೃತಿಯನ್ನು ರಚಿಸುತ್ತಿರುವಾಗ ಹಿಂದೆ ಮನಸ್ಸಿನಲ್ಲಿ ರೂಪಿಸಿಕೊಂಡ ಮೂಲಯೋಜನೆ

ಯನ್ನು ಬದಲಾಯಿಸುವುದು ಆತನಿಗೆ ಒಪ್ಪಿಗೆಯಾಗುತ್ತಿರಲಿಲ್ಲ. ಅಂತಹ ಬದಲಾವಣೆಗಳು ಅವಶ್ಯ ಬೀಳುವುದು ಮೊದಲೇ ಸಾಕಷ್ಟು ಆ ವಿಷಯ ಯೋಚಿಸದೆ ಇದ್ದುದರ ಪರಿಣಾಮವೆಂದೇ ಆತನ ಅಭಿಪ್ರಾಯ.''

ಆಶಾನನ ಪ್ರಮುಖ ಪದ್ಯಕೃತಿಗಳಲ್ಲಿ ಕಂಡುಬರುವ ಶಕ್ತಿಯುತವಾದ ರಚನೆ ಮತ್ತು ಪ್ರಮಾಣದ ಒಂದು ಅರಿವು—ಇವು ಆತನ ಜಾಗರೂಕವಾದ ಪೂರ್ವಸಿದ್ಧತೆ ಮತ್ತು ಚಿಂತನೆಗಳ ಪರಿಣಾಮಗಳು. ಕೃತಿಯನ್ನು ರಚಿಸುತ್ತಿದ್ದಾಗ ಆತನು ಸಹಜವಾಗಿಯೇ ಶಬ್ದಗಳ ಮತ್ತು ಶಬ್ದಪುಂಜಗಳ ಉಚಿತಪ್ರಯೋಗಕ್ಕೆ ಗಮನ ಕೊಡುತ್ತಿದ್ದನು. ಆ ಘಟ್ಟದಲ್ಲಿ ಪುನರವಲೋಕನವೂ ತಿದ್ದುಪಡಿಯೂ ತೀರ ಸಹಜ. (ಪುಟ 2 ರಲ್ಲಿ ಕೊಟ್ಟ ಶ್ಲೋಕದ ಕರಡುಪ್ರತಿಯ ಛಾಯಾಪತವನ್ನು ನೋಡಿ).

ಆತನು ಸಾಧಾರಣವಾಗಿ ಕ್ಯಾನ್ವಾಸ್ ಒಟ್ಟೆಯ ಇಸೀಚೇರಿನಲ್ಲಿ ಕುಳಿತುಕೊಂಡು, ಬರೆಯುವ ಪುಸ್ತಕವನ್ನಿಡಲು ಒಂದು ತೆಳ್ಳಗಿನ ಮರದ ಹಲಗೆಯನ್ನು ಉಪಯೋಗಿಸಿಕೊಂಡು, ತನ್ನ ಕೃತಿಗಳನ್ನು ಬರೆಯುತ್ತಿದ್ದನು. ವಿಶೇಷತಃ ಪದ್ಯಕೃತಿಗಳನ್ನು ಸಂಸ್ಕೃತ ಛಂದಸ್ಸಿನಲ್ಲಿ ರಚಿಸುತ್ತಿದ್ದಾಗ ಆತನು ಆಗಾಗ ಶಬ್ದಗಳನ್ನು ಗುಣುಗುಟ್ಟುತ್ತ ವೃತ್ತ ಪಾದಗಳನ್ನು ಸರಿಪಡಿಸಿಕೊಳ್ಳುತ್ತ ಕೋಣೆಯಲ್ಲಿ ಅತ್ತಿತ್ತ ತಿರುಗಾಡುತ್ತಿದ್ದನು. ತನ್ನ ಕಲಾಕೃತಿಗಳಿಗೆ ರೂಪು ಬಣ್ಣಗಳನ್ನು ಆಶಾನನು ಕೊಡುತ್ತಿದ್ದ ರೀತಿ ಹೀಗೆ.

## 13. ಕರುಣೆ

ಆಶಾನನ ಕೊನೆಯ ಪ್ರಧಾನಕೃತಿ 'ಕರುಣೆ' ಎಂಬುದು. ಅನೇಕ ವಿಮರ್ಶಕರು ಇದನ್ನು ಆತನ ಅತ್ಯುತ್ತಮ ಕೃತಿ ಎಂದು ಪರಿಗಣಿಸುತ್ತಾರೆ. ಆದರೆ ಕೆಲವರು ಇದನ್ನೊಪ್ಪುವುದಿಲ್ಲ. ಕೆಲ ಲೇಖಕರ ಕೃತಿಗಳಲ್ಲಾದರೋ ಅವರ ಅತ್ಯುತ್ತಮ ಕೃತಿಯನ್ನು ಗುರುತಿಸಿ ಹೇಳುವುದು ಸುಲಭ. ಆಶಾನನು ಈ ವರ್ಗಕ್ಕೆ ಸೇರಿದವನಲ್ಲ. ಕೆಲವರು 'ಸೀತೆ'ಯು ಆತನ ಅತ್ಯುತ್ತಮ ಕೃತಿಯೆಂದು ಹೇಳುವರು. ಇನ್ನಿತರರು ಆತನ ಕೃತಿಗಳಲ್ಲಿ 'ನಳಿನಿ'ಯನ್ನು ಹೆಸರಿಸುವರು. ಹೇಗಿದ್ದರೂ ಹೆಚ್ಚಿನ ವಿಮರ್ಶಕರು ಅತ್ಯುತ್ತಮವೆಂದು ಪರಿಗಣಿಸಿರುವುದು 'ಕರುಣೆ'ಯನ್ನು.

ಇಲ್ಲಿ ಕೂಡ ಆಶಾನನು ಒಂದು ಸುಪ್ರಸಿದ್ಧ ಕಥೆಯನ್ನು ತನ್ನ ಕೃತಿಯ ವಸ್ತುವಾಗಿ ಆರಿಸಿರುವನು. ಈ ಕಥೆ ಭಾರತದ ಹಲವು ಭಾಷೆಗಳಲ್ಲಿ ಕಂಡುಬರುವ ವಾಸವದತ್ತೆ ಉಪಗುಪ್ತರ ಕಥೆ. ಇದೇ ಕಥೆಯನ್ನು ಕುರಿತಾದ ರವೀಂದ್ರನಾಥ ಠಾಕೂರರ ಅಭಿಸಾರವೆಂಬ ಕವಿತೆಯೂ ಸುವಿಖ್ಯಾತವಾಗಿದೆ. 'ಬೋಧಿಸತ್ವಪದನ

ಕಲ್ಪಲತ ' ಎಂಬುದು ಅವರ ಈ ಕೃತಿಗೆ ಮೂಲ. ಡಾ. ಪಾಲ್ ಕ್ಯಾರಸ್‌ರವರು ಬರೆದ 'ಗಾಸ್ಪೆಲ್ ಆಫ್ ಬುದ್ಧ' ಎಂಬ ಕೃತಿಯ ಕಥೆಯನ್ನು ಆಶಾನನು ತನ್ನ ಕೃತಿಯಲ್ಲಿ ಉಪಯೋಗಿಸಿಕೊಂಡಿರುವನೆಂದು ತೋರುತ್ತದೆ. ಮೂಲತಃ ಕಥೆಯು ಒಂದೇ ಆದರೂ ಆಶಾನನು ಕೆಲವು ಮುಖ್ಯ ಬದಲಾವಣೆಗಳನ್ನು ಕಥಾವಿವರದಲ್ಲಿ ಮಾಡಿ ಕೊಂಡಿದ್ದಾನೆ. ಆಶಾನನ ಕವಿತೆಯಲ್ಲಿ ಬರುವಂತೆ ಆ ಕಥೆಯನ್ನು ನಾವು ಈಗ ಪರಿಶೀಲಿಸುವ.

ವಾಸವದತ್ತೆಯು ಉತ್ತರ ಮಥುರೆಯಲ್ಲಿದ್ದ ಸುಪ್ರಸಿದ್ಧ ವೇಶ್ಯೆ. ಆಕೆಯು ಅತಿ ರೂಪವತಿ. ನರ್ತನದಲ್ಲಿಯೂ ಸ್ತ್ರೀಯರಿಗೆ ತಕ್ಕುದಾದ ಇತರ ಕಲೆಗಳಲ್ಲಿಯೂ ಪರಿಣತೆ. ಮಥುರೆಯ ಶ್ರೀಮಂತರು ಆಕೆಯನ್ನು ಮನಮೆಚ್ಚಿಸಲು ತಮ್ಮ ಸಂಪತ್ತನ್ನು ಆಕೆಯ ಪದತಲದಲ್ಲಿ ಸುರಿಯುತ್ತಿದ್ದರು. ಆದರೆ ಅದೇನೋ ವಿಧಿವಿಲಾಸದಿಂದ ಆಕೆಯು ಸುಖಸಂಪತ್ತುಗಳನ್ನು ಪರಿತ್ಯಜಿಸಿದ್ದ ಬುದ್ಧಶಿಷ್ಯನಾದ ಉಪಗುಪ್ತನನ್ನು ಮೋಹಿಸು ವಳು. ಆತನನ್ನು ತನ್ನ ಮೋಹಜಾಲದಲ್ಲಿ ಬೀಳಿಸಲು ಸರ್ವಪ್ರಯತ್ನಗಳನ್ನು ಮಾಡುವಳು. ಆದರೆ ಆಕೆಯು ಪ್ರಯತ್ನದಲ್ಲಿ ಸಫಲೆಯಾಗುವುದಿಲ್ಲ. ಉಪಗುಪ್ತನು ಅವಿಚಲಿತನಾಗಿಯೇ ಇರುವನು. ವಾಸವದತ್ತೆಯು ಆತನ ಒಲುಮೆಯನ್ನು ಪ್ರಾರ್ಥಿಸಿ ತನ್ನ ದಾಸಿಯೊಬ್ಬಳನ್ನು ಆತನಲ್ಲಿಗೆ ಕಳುಹಿಸುವಳು. ಅದಕ್ಕೆ ಆತನ ಉತ್ತರ— 'ಉಪಗುಪ್ತನು ವಾಸವದತ್ತೆಯನ್ನು ಸಂಧಿಸಲು ತಕ್ಕ ಕಾಲವು ಇನ್ನೂ ಬಂದಿಲ್ಲ.'

ಇದನ್ನು ಕೇಳಿ ಅವಳಿಗೆ ಆಶ್ಚರ್ಯವಾಯಿತು. ತುಂಬಾ ನಿರಾಶೆಯೂ ಆಯಿತು. ಏಕೆಂದರೆ ಆಕೆಯು ಆತನಿಂದ ಹಣವನ್ನು ಬಯಸಿರಲಿಲ್ಲ. ಒಲವನ್ನು ಮಾತ್ರ ಬಯಸಿದ್ದಳು. ಸ್ವಲ್ಪ ಸಮಯದಲ್ಲಿಯೇ ಆಕೆಯು ತನ್ನ ವೇಶ್ಯಾ ಸಹಜವೃತ್ತಿಯಲ್ಲಿ ತಿರುಗಿ ಮಗ್ನಳಾದಳು. ವಾಸವದತ್ತೆಗೆ ದೂರದೇಶದ ಧನಿಕ ಚೆಟ್ಟಿಯಾರನೊಬ್ಬನು ಹೊಸ ವಿಟನಾದನು. ಕುಶಲಕಲೆಗಳ ಮುಖಂಡನೊಬ್ಬನು ಆಕೆಗೆ ಹಿಂದಿನಿಂದಲೇ ವಿಟನಾಗಿದ್ದನು. ಈ ಇಬ್ಬರು ಒಬ್ಬರೊಡನೊಬ್ಬರು ಜಗಳವಾಡಲಾರಂಭಿಸಿದ್ದರು. ವಾಸವದತ್ತೆಯು ಇವರಲ್ಲೊಬ್ಬನ ಪಕ್ಷ ವಹಿಸುತ್ತಿದ್ದಳು. ಈ ಜಗಳವು ಅವಳ ಹತೋಟಿ ತಪ್ಪಿದ ಮೇಲೆ ಆಕೆಯು ಕುಶಲಕರ್ಮಿಗಳ ಮುಖಂಡನನ್ನು ಕೊಲ್ಲಿಸಿದಳು. ಈ ವ್ಯವಹಾರ ಕೋರ್ಟಿಗೆ ಹೋಯಿತು. ತೀರ್ಪು ಹೊರಬಿತ್ತು. ಕೊನೆಗೆ ವಾಸವದತ್ತೆಯು ಶಿಕ್ಷಿಸಲ್ಪಡುವಳು. ಅವಳ ಕೈ, ಕಾಲು, ಮೂಗು, ಕಿವಿಗಳನ್ನು ತುಂಡರಿಸಿ ಆಕೆಯ ವಿಕೃತಶರೀರವನ್ನು ಸ್ಮಶಾನದಲ್ಲಿ ಹಾಕಿಬಿಡುವರು. ಅವಳು ಈ ರೀತಿ ಮರಣವನ್ನು ಪ್ರತೀಕ್ಷಿಸುತ್ತಿದ್ದಾಗ ಆಕೆಯು ಹಿಂದೆ ಪ್ರೀತಿಸಿದ್ದ ಉಪಗುಪ್ತನು ಅಲ್ಲಿ ಬರುವನು. ಕಥೆಯ ಅತಿ ಮುಖ್ಯ ಭಾಗವು, ಮೇಲಿನ ಕೆಲ ನಿಮಿಷಗಳಲ್ಲೇ ಆಕೆಯು ಜೀವನಮರಣ ಗಳ ನಡುವೆ ತುಯ್ಯಾಲಾಡುತ್ತಿದ್ದಾಗ ಜರಗಿಹೋಗುವುದು. ವಾಸವದತ್ತೆಯು ಭಿಕ್ಷು ವನ್ನು ಗುರುತಿಸುವಳು. ನಡೆದುಹೋದ ಎಲ್ಲಾ ಘಟನೆಗಳನ್ನೂ ತಿಳಿದಿದ್ದ ಆ ಭಿಕ್ಷುವು ಆಕೆಯ ಕ್ಷುಭಿತ ಮನಸ್ಸನ್ನು ಸಮಾಧಾನಗೊಳಿಸುವನು. ಆಕೆಯ ಕಾಮನೆಗಳನ್ನು ಉದಾತ್ತೀಕರಿಸುವನು. ಆಕೆಗೆ ಹೊಸದರ್ಶನವೊಂದನ್ನಿತ್ತು ನಿರ್ವಾಣವನ್ನು ಪಡೆಯಲು ಆಕೆಯನ್ನು ಸಿದ್ಧಗೊಳಿಸುವನು.

‘ಕರುಣೆ’ಯು ಕುಮಾರನ್ ಆಶಾನನ ಕೃತಿಗಳಲ್ಲಿ ಅತ್ಯಂತ ಜನಪ್ರಿಯತೆಯನ್ನು ಪಡೆದ ಕೃತಿ. ಮಲಯಾಳಭಾಷೆಯಲ್ಲಿ ಬಹುಜನಪ್ರಿಯವಾದ ಕವಿತೆಗಳಲ್ಲಿ ಇದೊಂದು. ಸಾಮಾನ್ಯಜನರೂ ‘ಕರುಣೆ’ಯ ಕೆಲ ಸಾಲುಗಳನ್ನು ನೆನಪಿನಿಂದ ಹಾಡಬಲ್ಲರು. ಈ ರೀತಿ ಜನತೆಯ ಮೆಚ್ಚುಗೆಯನ್ನು ಗಳಿಸಿದ ಕವಿತೆಗಳು ಯಾವ ಭಾಷೆಯಲ್ಲೇ ಆಗಲಿ, ಹೆಚ್ಚಿರಲಾರವು. ಸ್ವಾಮಿ ಬ್ರಹ್ಮವ್ರತನು ‘ಕರುಣೆ’ಯನ್ನು ನಾಟಕ ರೂಪದಲ್ಲಿ ರಚಿಸಿದನು. ಈ ನಾಟಕವು ಮೂವತ್ತು ನಲವತ್ತನೇ ದಶಕಗಳಲ್ಲಿ ನಾಟಕರಂಗದಲ್ಲಿ ಅತ್ಯಂತ ಯಶಸ್ಸನ್ನು ಪಡೆಯಿತು. ಕೀರ್ತಿಯನ್ನು ಗಳಿಸಿತು. ಆ ಮೇಳದವರು ಕೇರಳದ ಉದ್ದಗಲಕ್ಕೂ ಈ ನಾಟಕವನ್ನು ಪ್ರದರ್ಶಿಸಿದರು. ಜನರೆಲ್ಲರೂ ಈ ನಾಟಕವೆಂದರೆ ಮರುಳಾಗಿಬಿಡುತ್ತಿದ್ದರು. ಇಂತಹ ಪರಿಸ್ಥಿತಿ ಅನೇಕ ವರ್ಷಗಳ ವರೆಗಿತ್ತು. ಇದು ಆ ಕೃತಿಯನ್ನು ಇನ್ನೂ ಹೆಚ್ಚು ಜನಪ್ರಿಯಗೊಳಿಸಲು ಕಾರಣವಾಯಿತು. ಆಮೇಲೆ ‘ಕರುಣೆ’ಯ ಚಿತ್ರಪಟವನ್ನೂ ತೆಗೆದರು. ಆದರೆ ಚಿತ್ರರಂಗದಲ್ಲಿ ಇದು ಅಷ್ಟು ಯಶಸ್ವಿಯಾಗಲಿಲ್ಲ. ಕೆಲ ಕವಿತೆಗಳು ಜನರನ್ನು ಮೆಚ್ಚಿಸುತ್ತವೆ. ಆದರೆ ತಜ್ಞರ ಮೆಚ್ಚುಗೆಯನ್ನು ಗಳಿಸುವುದಿಲ್ಲ. ಕೆಲವನ್ನು ತಜ್ಞರು ಮೆಚ್ಚುತ್ತಾರೆ. ಆದರೆ ಅವು ಜನಪ್ರಿಯತೆಯನ್ನು ಗಳಿಸುವಲ್ಲಿ ಅಸಮರ್ಥವಾಗುತ್ತವೆ. ‘ಕರುಣೆ’ಯು ಹಾಗಲ್ಲ. ಅದು ಜನತೆಯ ಮತ್ತು ತಜ್ಞವಿಮರ್ಶಕರ ಮೆಚ್ಚುಗೆಯನ್ನು ಗಳಿಸಿದೆ. ಈ ಕವಿತೆಯ ಹಿರಿಮೆಯನ್ನು ಜೋಸೆಫ್ ಮುಂಡಶ್ಶೇರಿಯಂತಹ ಸುಪ್ರಸಿದ್ಧ ವಿಮರ್ಶಕರು ವಿವರಿಸಿದ್ದಾರೆ. ಕರುಣೆಯನ್ನು ಅಷ್ಟೊಂದು ಉತ್ತಮವೂ ಜನಪ್ರಿಯವೂ ಆಗಿಸಿದ ಅದರ ಅಂತಸ್ಸತ್ವ ಯಾವುದು?

ಮೊದಲನೆಯದಾಗಿ, ಅದರ ಕಥಾವಸ್ತು ಹೃದಯಸ್ಪರ್ಶಿಯಾಗಿದೆ. ಶೃಂಗಾರವು ರಸಗಳಲ್ಲಿ ಪ್ರಧಾನವಾದುದು. ಇದು ಕರಗಿಸದ ಎದೆಯಿಲ್ಲ. ಅನೇಕ ಜಟಿಲಸಮಸ್ಯೆಗಳಿಗೂ ಈ ಸ್ತ್ರೀಪುರುಷರ ಪ್ರೇಮವೇ ಕಾರಣವಾಗಿದೆ. ಪ್ರೇಮವು ಪ್ರೇಮಚೇಷ್ಟೆಗಳಲ್ಲಿ ಕೊನೆಗಾಣುತ್ತದೆ. ಇಂತಹ ಪ್ರೇಮಚೇಷ್ಟೆಗಳನ್ನು ತೋರಿಸುವುದೇ ಕಸುಬಾಗಿ ಉಳ್ಳ ಒಬ್ಬ ವೇಶ್ಯೆಯು ಕಥೆಯ ನಾಯಕಿಯಾದಾಗ ಅದು ನೇರವಾಗಿಯೇ ಎಲ್ಲರ ಹೃದಯವನ್ನೂ ಮುಟ್ಟುತ್ತದೆ. ಆಕರ್ಷಿಸುತ್ತದೆ. ಮಲಯಾಳದ ಮೂವರು ಮಹಾಕವಿಗಳಲ್ಲಿ ಉಳಿದ ಇಬ್ಬರಾದ ವಲ್ಲತ್ತೋಳ, ಉಳ್ಳೂರರೂ ವೇಶ್ಯೆಯರ ಮನಸ್ಸು ಪರಿವರ್ತನೆಗೊಂಡ ಕಥಾವಸ್ತುವುಳ್ಳ ಕೃತಿಗಳನ್ನು ಬರೆದಿದ್ದಾರೆ ಎನ್ನುವುದೂ ಗಮನಾರ್ಹ. ವಲ್ಲತ್ತೋಳರ ಮಗ್ದಲೀನ ಮರಿಯಮ್ ಮತ್ತು ಉಳ್ಳೂರರ ಪಿಂಗಳ— ಇವು ಅಂತಹ ಕಥಾವಸ್ತುವುಳ್ಳ ಕೃತಿಗಳು.

ಸ್ನೇಹಗಾಯಕನೆಂದು ಜನತೆಯಲ್ಲಿ ಪ್ರಸಿದ್ಧನಾದ ಆಶಾನನು ಪ್ರೇಮದ ವಿವಿಧ ಮುಖಗಳನ್ನು ತನ್ನ ಕೃತಿಗಳಲ್ಲಿ ತೋರಿಸಿದ್ದಾನೆ. ನಳಿನಿ, ಲೀಲ, ದುರವಸ್ಥೆ, ಚಂಡಾಲಭಿಕ್ಷುಕಿ ಎಂಬ ಕೃತಿಗಳನ್ನು ನಾವೀಗಲೇ ಪರಿಶೀಲಿಸಿದ್ದೇವೆ. ಆದರ್ಶದ ಎತ್ತರದಿಂದ ತಗ್ಗಿನವರೆಗೆ ಪ್ರೇಮದ ಚಿತ್ರಣವು ಈ ಕೃತಿಗಳಲ್ಲಿ ಬಂದಿದೆ. ಈ ಕೃತಿಗಳ ಕಥಾನಾಯಕಿಯರು ಈ ಏಣಿಯ ಬೇರೆಬೇರೆ ಮೆಟ್ಟಲುಗಳಲ್ಲಿ ನಿಂತಿದ್ದಾರೆ. ಇವರಲ್ಲಿ ಮೇಲಿನ ಮೆಟ್ಟಲಲ್ಲಿ ನಿಂತವಳು ನಳಿನಿ. ‘ಕರುಣಾ’ ಕೃತಿಗೆ ಬರುವಾಗ ಇಲ್ಲಿಯ

ಕಥಾನಾಯಕಿಯು ಎಲ್ಲರಿಂದ ಕೆಳಗಿನ ಮೆಟ್ಟಲಿನಲ್ಲಿರುವಂತೆ ಕಾಣುತ್ತದೆ. ವಾಸವ ದತ್ತೆಯು ನೈತಿಕ ಶಿಥಿಲತೆಯು ನಾಚಿಕೆ ಎಂದೆಣಿಸದ ವೇಶ್ಯೆ ಮಾತ್ರವಲ್ಲ. ಆಕೆಯು ಕ್ರೂರಿಯಾದ ಹಂತಕಿ. ಅಂತಹ ವ್ಯಕ್ತಿಯಲ್ಲಿಯೂ ಪರಿಶುದ್ಧ ಪ್ರೇಮದ ಕಿಡಿಯನ್ನು ನಾವು ನೋಡುತ್ತೇವೆ. ಉಪಗುಪ್ತನನ್ನು ನೋಡಿದೊಡನೆಯೇ ಈ ಕಿಡಿಯು ಉರಿಯಾಗಿ ಪ್ರಜ್ವಲಿಸುವುದು. ಆತನು ಆಕೆಗೆ ಒಲಿದರೆ ತನ್ನ ಸರ್ವಸ್ವವನ್ನೂ ಆತನ ಪದತಲದಲ್ಲಿ ಅರ್ಪಿಸಲು ಆಕೆಯು ಮನವಾಡಿದ್ದಳು. ಕಥಾನಾಯಕಿಯ ಈ ವಿಚಿತ್ರ ವರ್ತನೆ ಪ್ರತಿಯೊಬ್ಬ ಓದುಗನ ಮನಸ್ಸನ್ನೂ ಉದ್ವೇಗಗೊಳಿಸುತ್ತದೆ. ಮನಸ್ಸಿನಲ್ಲಿ ಸಹತಾಪದ ಭಾವವನ್ನು ಮೂಡಿಸುತ್ತದೆ. ಇದಕ್ಕೆ ಉಪಗುಪ್ತನ ಪ್ರತಿಕ್ರಿಯೆ ಇನ್ನೂ ವಿಚಿತ್ರ. ಆಕೆಯು ವಿರುಂಜವ್ವನೆಯಾಗಿರುವಾಗ ಆಕೆಯು ಬಳಿ ಬರುವುದನ್ನು ಬಿಟ್ಟು ಆಕೆಯು ಅಂಗವಿಹೀನೆಯಾಗಿ ಮರಣವನ್ನು ಪ್ರತೀಕ್ಷಿಸಿಕೊಂಡು ಬಿದ್ದಿದ್ದ ಆ ರುದ್ರಭೂಮಿಯಲ್ಲಿ ಆಕೆಯನ್ನು ನೋಡಲು ಆತನು ನಿರ್ಧರಿಸುವನು. ಅದೇ ಆತನು ಆಕೆಯನ್ನು ಸಂಧಿಸಲು ತಕ್ಕ ಸಮಯ. ಆದರೆ ಸಾಮಾನ್ಯಜನರಿಗೆ ಈ ಕಾಲ ಮಿಂಚಿಹೋದ ಸಮಯ. ಭೌತಿಕ ಜೀವನವೇ ಯಥಾರ್ಥವಾದುದೆಂದು ನಂಬಿದ ಜನರಿಗೆ ನಿಜವಾಗಿಯೂ ಇದು ಮಿಂಚಿಹೋದ ಸಮಯವೇ. ಆದರೆ ಮೃತ್ಯುವಿ ನಾಚೆಗಿನ ಅಮೃತ ಜೀವನದಲ್ಲಿ ನಂಬಿಕೆ ಇದ್ದವರಿಗೆ ಈ ಸಮಯವು ಮಿಂಚಿ ಹೋದುದಲ್ಲ.

ಕಲಾಕೃತಿಯಾಗಿ ಕರುಣೆಯು ಉನ್ನತಸ್ಥಾನವನ್ನು ಹೊಂದಲು ಕಾರಣ ಅದರ ನಾಟಕೀಯ ನಿರೂಪಣೆ. ಈ ನಾಟಕೀಯ ತಂತ್ರವನ್ನು ಮನಸ್ಸಿನಲ್ಲಿಟ್ಟು ಕೊಂಡೇ ತನ್ನ ಪ್ರಧಾನಕೃತಿಗಳನ್ನು ಆಶಾನನು ರೂಪಿಸಿದ್ದಾನೆ ಎಂಬುದನ್ನು ನಾವು ಹಿಂದೆಯೇ ನೋಡಿದ್ದೇವೆ. ಅದು ಹೇಗಿದ್ದರೂ ನಾಟಕೀಯಗುಣದ ಅತ್ಯುನ್ನತಿ ಯನ್ನು ಕವಿಯು ಕರುಣೆಯೆಂಬ ಈ ಕೃತಿಯಲ್ಲಿ ತಲಪಿದ್ದಾನೆ. ಕವಿಯು ಉಚಿತವಾದ ಸಹಜಸುಂದರ ವರ್ಣನೆಗಳನ್ನು ರಚಿಸಿರುವುದು ಈ ಕೃತಿಯಲ್ಲಿ ಎದ್ದುಕಾಣುವ ಇನ್ನೊಂದು ಗುಣ. ನಾಟಕೀಯ ಸಂದರ್ಭದಲ್ಲಿ ಅನೇಕ ಸಹಜ ಚಿತ್ರಣಗಳನ್ನು ಕವಿಯು ಮಾಡಿದ್ದಾನೆ. ಇಂತಹ ಚಿತ್ರಣಕ್ಕೆ ಕವಿತೆಯ ಮೊದಲ ಪದ್ಯವೇ ಒಂದು ಉತ್ತಮ ಉದಾಹರಣೆ. ಕವಿತೆಯ ನಾಟಕೀಯತೆಯೂ ವರ್ಣನೆಗಳೂ ಕರುಣೆ ಯನ್ನು ಸ್ವಾರಸ್ಯಯುತವಾಗಿ ಸುಂದರಕಲಾಕೃತಿಯನ್ನಾಗಿ ಮಾಡಿವೆ.

ಕಥಾ ಸಂದರ್ಭವನ್ನು ಕೆಲ ಸಾಲುಗಳಲ್ಲಿ ವಿವರಿಸಿದ ಮೇಲೆ ಕವಿಯು ಕಥಾನಾಯಕಿಯು ಕುಳಿತಿದ್ದ ಸನ್ನಿವೇಶವನ್ನು ವಿವರಿಸಿ ಆಕೆಯ ಸುಂದರ ನಿಲವನ್ನು ಕೆಳಗಿನ ಮಾತುಗಳಲ್ಲಿ ಚಿತ್ರಿಸುತ್ತಾನೆ.

'ಮೆಲ್ಲನೆ ಮುಂದಕೆ ಬಾಗಿ, ಸೀರೆಯ
ಸೆರಗು ಮುಂಗುರುಳುಗಳ ಮೇಲೆ ಒಂದೆಡೆ ಬಂದು ನಿಂದಿರಲು
ಹರಳಿನ ಕಾಂತಿ ಸೂಸುವ ಕರ್ಣಪೂರ ಶೋಭಿಸಲು
ಕಪ್ಪುಮೋಡದಂತಿಹ ಕೂದಲ ಮೇಲೆ ಮೊಲ್ಲೆ ಮೊಗ್ಗುಗಳ
ಮಾಲೆಯು ವಿರಾಜಿಸಲು,

ಅದರಡಿಗೆ ಕತ್ತುರಿಯ ಬೊಟ್ಟಿನ ಹಣೆಯ
ಮುಖಚಂದ್ರ ಬೆಳಗುತಿರೆ, ಸ್ವರ್ಣಕಮಲಕ್ಕೆ ಮಿಗಿಲಾಗಿ
ಮೋಹಕವಾದ ಬಲಪಾದವು ಎಡತೊಡೆಯ ಮೇಲಿರಲು
ಲಾವಂಚದ ಬೀಸಣಿಗೆಯನು
ಪನ್ನೀರೊಳದ್ದಿ ಸಖಿಯು ಕೈಬಳಿ ಗಿಲಿರೆನಲು
ಸಾವಧಾನ ಬೀಸುತಿರೆ ಮನ್ಮಥನ ಪಟ್ಟದ
ರಾಣಿಯಂತೆ ಮಂಜುಳಾಂಗಿಯು ಅಲ್ಲಿ ಕುಳಿತಿಹಳು.'

ಮೇಲಿನ ಸಾಲುಗಳು ಇಡೀ ದೇಹದ ಛಾಯಾ ಪಠವನ್ನು ನಮ್ಮ ಮುಂದಿಡುವಂತಿದೆ. ಹಾಗೆಯೇ ಆ ವರ್ಣನೆ ಮುಂದರಿಯುತ್ತದೆ.

'ಮೇಘದಂತೆ ಕರಿದಾದ ವೇಣಿಯಿರುವ ಹೆಂಗುಸು
ಒಂದು ಮಲರ ಗೊಂಚಲನು ಕೈಯಲ್ಲಿ ತಿರುಗಿಸುತ
ಕಾತರತೆಯಲಿ ಕಾದಿಹಳು. ತೆರೆಯ ತರಂಗ
ಮಧ್ಯದಿಂದ ಮೇಲೇಳುವ ತಾವರೆಯಂತೆ ಎಳೆಗಾಳಿ
ಯಿಂದ ಚಲಿಸಿದ ಸೀರೆಯ ನೆರಿಗೆಗಳಿಂದ ಹೊರ
ಕಾಣಿಸುತ್ತಿರುವ ಬಲಪಾದಾಬ್ಜವನ್ನು ಆಕೆಯು ಚಲಿ
ಸುವಾಗ ನೂಪುರಗಳು ಝಣರೆನ್ನುತ್ತವೆ.'

ಆಕೆಯು ಯಾರೋ ಒಬ್ಬನಿಗಾಗಿ ಕಾತರತೆಯಿಂದ ಕಾದಿರುತ್ತಾಳೆ. ಆಗ ಆಕೆಯ ದಾಸಿಯು ಉಪಗುಪ್ತನಲ್ಲಿಂದ ಹಿಂತಿರುಗಿ ಬರುತ್ತಾಳೆ. ಕವಿತೆಯಲ್ಲಿ ಈ ಸನ್ನಿವೇಶದಿಂದ ನಾಟಕೀಯತೆಯು ಆರಂಭವಾಗುತ್ತದೆ. ಆಕೆಯು ದಾಸಿಯೊಡನೆ ನಡೆಸುವ ಸಂಭಾಷಣೆಯು ಸಹಜವಾಗಿದೆ. ಒಬ್ಬ ಪ್ರೇಮಿಯ ಉತ್ಕಟಭಾವಗಳಿಂದ ತುಂಬಿದೆ.

'ಇಂಥ ಕಮನೀಯ ಕಾಂತಿಯಿಂದ ಕೂಡಿದ ಪುರುಷನು ಹೀಗೆ
ಕಾಮಿನೀವಿಮುಖನಾದರೆ ಅದು ಕ್ರೌರ್ಯವಲ್ಲವೆ?

ಉಪಗುಪ್ತನ ಮೇಲಿನ ತನ್ನ ಸ್ನೇಹವು ಇತರ ವೇಶ್ಯೆಯರ ಸ್ನೇಹದಂತಿಲ್ಲದೆ ನಿಸ್ವಾರ್ಥವಾಗಿಯೂ ಪ್ರಾಮಾಣಿಕವಾಗಿಯೂ ಇದೆ ಎಂಬುದನ್ನು ವಾಸವದತ್ತೆಯು ತನ್ನ ಮಾತಿನಲ್ಲಿ ವ್ಯಕ್ತಪಡಿಸುವಳು. ಈ ದೃಶ್ಯದ ಕೊನೆಯಲ್ಲಿ ಕವಿಯು ಶ್ರೀಮಂತ ಚೆಟ್ಟಿಯಾರನ ಪರಿಚಯವನ್ನು ಮಾಡಿಸುವನು. ಅವನು ಆಡಂಬರದಿಂದ ಅಲಂಕರಿಸಿದ ಎತ್ತಿನ ಗಾಡಿಯಲ್ಲಿ ಬರುತ್ತಾನೆ. ಆತನ ಬರುವಿಕೆಯ ವರ್ಣರಂಜಿತ ವರ್ಣನೆಯು ಸನ್ನಿವೇಶದ ನಾಟಕೀಯತೆಯನ್ನು ಹೆಚ್ಚಿಸುತ್ತದೆ.

ಈ ಸಂದರ್ಭದಲ್ಲಿ ಕಥಾನಾಯಕಿಯು ತೋರಿಸಿದ ಪ್ರತಿಕ್ರಿಯೆಯನ್ನು ಒಂದು ಉಚಿತ ಉಪಮೆಯ ಮೂಲಕ ಕವಿಯು ವರ್ಣಿಸಿದ್ದಾನೆ.

'' ದಡದಲ್ಲಿ ತುಸುಕಾಲ ನಿಂತು ನಸುಲಜ್ಜೆಯಿಂದ ತಿರುಗಿ
ತನ್ನ ಕೊಳಕ್ಕೆ ಹಿಂದಿರುಗುವ ಪೆಣ್ಣಂಚೆಯಂತೆ
ಆಕೆಯು ಆ ಸ್ಥಳವನ್ನು ಬಿಟ್ಟು ಸಾಗಿದಳು.''

ದ್ವಿತೀಯ ದೃಶ್ಯವು ಹೆಚ್ಚಿನ ಪ್ರತಿಯೊಂದು ವಿವರಗಳಲ್ಲಿಯೂ ಮೊದಲನೆಯ ದಕ್ಕೆ ಸಮಾನಾಂತರದಲ್ಲಿದೆ. ಇಲ್ಲಿಯೂ ವಾಸವದತ್ತೆಯೇ ಮುಖ್ಯ ಪಾತ್ರ. ಆದರೆ ಆಕೆಯು ಹಿಂದಿನಂತೆ ಯೌವನ ಮದದಿಂದ ಬೀಗಿ ಕಾಮುಕರ ಮನಸೆಳೆಯುವ ಹಾವಭಾವಗಳಿಂದ ಕೂಡಿದ ಸುರಸುಂದರಿಯಂತಿಲ್ಲ. ಅಸಹ್ಯಕರವಾದ ದುರವಸ್ಥೆಯಲ್ಲಿ ಬಿದ್ದಿರುವ ಅಂಗಗಳು ತುಂಡರಿಸಲ್ಪಟ್ಟ ಹೆಂಗಸು. ಆಕೆಯು ಈಗ ಇರುವುದು ವೈಭವ ಯುತವಾದ ಅಶೋಕೆಯ ಮರದಡಿಯಲ್ಲಲ್ಲ. ಹಳೆಯ ಆಲದ ಮರದಡಿಯಲ್ಲಿ. ಹಿಂದಿನ ಆ ದಾಸಿಯೂ ಇಲ್ಲಿದ್ದಾಳೆ. ಆದರೆ ಆಕೆಯು ತನ್ನ ಒಡತಿಗೆ ಸುಖವನ್ನು ಕೊಡಲು ಸುಗಂಧಯುತವಾದ ಬೀಸಣಿಗೆಯನ್ನು ಬೀಸುತ್ತಿಲ್ಲ. ಒಂದು ಸಣ್ಣಗೆಲ್ಲನ್ನು ಹಿಡಿದು ಕೊಂಡು ಒಡತಿಯ ವ್ರಣಗಳಿಗೆ ಮುಸುರುತ್ತಿರುವ ಕಾಗೆಗಳನ್ನು ಓಡಿಸುತ್ತಿದ್ದಾಳೆ. ಮೊದಲನೆಯ ದೃಶ್ಯದಲ್ಲಿ ಕೊಟ್ಟ ಎಲ್ಲ ವಿವರಗಳೂ ಆಕೆಯ ವಿಲಾಸವಿಭ್ರಮಗಳ ಪ್ರವರ್ಧಮಾನಕ್ಕೆ ಸಹಕಾರಿಯಾಗಿವೆ. ಎರಡನೆಯ ದೃಶ್ಯದಲ್ಲಿ ಬರುವ ಎಲ್ಲ ವಿವರಗಳೂ ಅಸಹ್ಯ ಮತ್ತು ಅವಮಾನಗಳ ಹೆಚ್ಚಳಕ್ಕೆ ಸಹಕಾರಿಯಾಗಿವೆ. ಮೊದಲನೆಯ ದೃಶ್ಯದ ಕೊನೆಗೆ ಚೆಟ್ಟಿಯಾರನ ಪ್ರವೇಶವಿರುವಂತೆಯೇ ಎರಡನೆಯ ದೃಶ್ಯದ ಕೊನೆಗೆ ಉಪಗುಪ್ತನ ಪ್ರವೇಶವಿದೆ. ಹೀಗೆ ಎಲ್ಲ ವಿವರಗಳಲ್ಲಿಯೂ ಕವಿತೆಯಲ್ಲಿ ಈ ವಿರೋಧವು ಕಲಾವಂತಿಕೆಯಿಂದ ಸಾಧಿಸಲ್ಪಟ್ಟಿದೆ. ಇದನ್ನು ಸೂಕ್ಷ್ಮವಾಗಿ ಓದಿದ ಪ್ರತಿಯೊಬ್ಬರೂ ಕವಿಯು ತೋರಿಸಿರುವ ನಾಟಕೀಯ ರಚನಾಚಾತುರ್ಯದಿಂದಲೂ ಕವಿತೆಯ ರಚನಾ ಕೌಶಲದಿಂದಲೂ ಮುಗ್ಧರಾಗುವರು.

ಮೂರನೆಯದಾದ ಕೊನೆಯ ದೃಶ್ಯದಲ್ಲಿ ಕಥಾನಾಯಕಿಯ ಮನಸ್ಸಿನ ಹೋರಾಟವು ಒಂದು ಅಂತಿಮ ನಿರ್ಧಾರವನ್ನು ಹೊಂದುವುದು. ಆ ಒಳ ಹೋರಾಟವು ವಾಸವದತ್ತೆಯಲ್ಲಿ ಅಂತರ್ಗತವಾಗಿದ್ದ ವೇಶ್ಯೆ ಮತ್ತು ಪರಿಶುದ್ಧ ಸ್ತ್ರೀ, ಇವರಿಬ್ಬರ ನಡುವಿನ ಹೋರಾಟ. ಆ ಹೆಂಗಸಿನಲ್ಲಿ ಸುಪ್ತವಾಗಿದ್ದ ದೈವಿಕ ಭಾವವು ಪುನಃ ಎಚ್ಚರಾಗುತ್ತದೆ. ಉಪಗುಪ್ತನ ಹೆಸರೇ ಆಕೆಗೆ ಅಮೃತದಂತೆ ಆಪ್ಯಾಯಮಾನವಾಗುತ್ತದೆ. ಆಕೆಯು ತನ್ನ ಮನದಲ್ಲೇಳುವ ಸುಖದುಃಖ ಮಿಶ್ರ ಭಾವಗಳನ್ನು ತಿಳಿಸಲು ಬಹುಕಷ್ಟದಿಂದ ಪ್ರಯತ್ನಿಸುತ್ತಾಳೆ. ಆಕೆಯ ಭಂಗಗೊಂಡ ವಾಗಿಂದ್ರಿಯಗಳಿಂದ ಹೊರಬರುತ್ತಿದ್ದುದು ತುಂಡುಶಬ್ದಗಳಾದರೂ ಆತನು ಅವನ್ನು ಅರ್ಥಮಾಡಿಕೊಳ್ಳುತ್ತಾನೆ. ಆಕೆಯ ವಿರೂಪಗೊಂಡ ಚಿಂತಾಜನಕ ಆಕಾರವನ್ನು ನೋಡಿ ಯಾವನೂ ನಡುಗಿ ಮೂರ್ಛೆಹೋಗಬೇಕು. ಆದರೆ ಉಪಗುಪ್ತನು ಅಚಲನಾಗಿರುತ್ತಾನೆ. ಆತನು ಕನಿಕರಿಸುತ್ತಾನೆ. ಆದರೆ ಉದ್ವೇಗಗೊಳ್ಳುವುದಿಲ್ಲ ಆಕೆಯ ಹೃದಯದಲ್ಲುದ್ಭವಿಸಿದ ನಿಜವಾದ ಪ್ರೀತಿಯ ಬುಗ್ಗೆಯನ್ನು ಆತನ. ಗಂಭೀರವಾಗಿಯೇ ತಿಳಿದುಕೊಳ್ಳುತ್ತಾನೆ. ಆಕೆಯ ದುರವಸ್ಥೆಯಲ್ಲಿ ಆತನು ಸಹತಾಪ

ವನ್ನು ತೋರುತ್ತಾನೆ. ಕನಿಕರಿಸುತ್ತಾನೆ. ಆಕೆಯು ಬಹುದೊಡ್ಡ ಅಪರಾಧವನ್ನು ಮಾಡಿದ್ದರೂ ಆತನು ಅವಳನ್ನು ಖಂಡಿಸುವುದಿಲ್ಲ. ಆಕೆಯಲ್ಲಿದ್ದ ಪ್ರೇಮವನ್ನೂ ಶ್ರದ್ಧೆಯನ್ನೂ ಗೌರವಿಸುತ್ತಾನೆ. ಆತನು ಆ ಪ್ರೇಮವನ್ನು ಹಿಂದಿರುಗಿಸುತ್ತಾನೆ. ಆದರೆ ಅದರ ವಿಧಾನ ಬೇರೆ. ಆತನ ಪ್ರೇಮಪರಿಶುದ್ಧ, ಸಾರ್ವತ್ರಿಕ, ವ್ಯಾಮೋಹ ರಹಿತ. ಇದು ಕರುಣೆ ಎಂಬ ಕವಿತೆಯ ಸಾರ ಸರ್ವಸ್ವ. ಆತನೆನ್ನುತ್ತಾನೆ,

"ಸೋದರಿಯೇ, ಅಳಬೇಡ. ಅಂಜಿಕೆಯ ತೊರೆ.
ಶಾಂತಿಯೊದಗುವುದು ನಿನಗೆ. ಅಷ್ಟಮಾರ್ಗ
ಚಾರಿಯಾದ ಭಗವಂತನ ಪರಿಶುದ್ಧ ಪಾದಪದ್ಮಗಳ
ಚಿರಕಾಲ ತೊಳೆದ ಕೈಗಳಿಂದ
ಮೆಲ್ಲಗೆ ನಿನ್ನ ಹಣೆಯನೊತ್ತುವೆನು."

ಆತನು ಆಕೆಯ ಹಣೆಯನ್ನು ಸವರಿ ಕಣ್ಣೀರನ್ನು ಒರಸಿದಾಗ, ಆಕೆಗೆ ತಾನು ಶಾಂತಿಯ ಧಾಮವಾಗಿರುವಂತೆ ಭಾಸವಾಗುತ್ತದೆ. ಆಕೆಯ ಆತ್ಮವು ಶರೀರವನ್ನು ಬಿಟ್ಟು ಹೋಗುವ ಆ ಒಂದು ಕ್ಷಣದಲ್ಲಿ ಹೊಸತನವನ್ನು ಆಕೆಯು ಅನುಭವಿಸುತ್ತಾಳೆ.

ಉಪಗುಪ್ತನು ಜ್ಞಾನಸನಿಧಿಯಾಗಿದ್ದರೂ, ಇತರರನ್ನು ಸರಿಯಾಗಿ ತಿಳಕೊಳ್ಳುವ ಶಕ್ತಿಯುಳ್ಳವನಾಗಿದ್ದರೂ, ಆತನ ದಯೆಯು ಕಣ್ಣೀರಿನ ರೂಪದಲ್ಲಿ ಹೊರಹೊಮ್ಮಿ ಉರಿಯುತ್ತಿರುವ ಆಕೆಯ ಚಿತೆಯ ಮೇಲೆ ಬೀಳುತ್ತದೆ.

"ಅದು ಬೇರೇನೂ ಅಲ್ಲ.
'ಕರುಣೆ' ಯೇ ತನ್ನಾಳದಲ್ಲಿ ಪಕ್ವತೆಯನ್ನು ಪಡೆದ
ಉಜ್ವಲ ಮುಕ್ತಾಫಲ."

ಆ ಕಣ್ಣೀರು ಪರಿಶುದ್ಧಪ್ರೇಮ ಮತ್ತು ದಯಾಭಾವಗಳ ಪರಿಣಾಮಕರವಾದ ಅಭಿವ್ಯಕ್ತಿ. 'ಕಲಾಭಿಮಾನಿದೇವತೆಗಳ ಎಲ್ಲಾ ಸೊಗಸೂ ಒಂದು ಸುಂದರ ಶಬ್ದದಲ್ಲಿ ಪುಷ್ಟಿಸುವುದನ್ನು' ನಾವು ಈ ಕಣ್ಣೀರಲ್ಲಿ ನೋಡುತ್ತೇವೆ.

ಕರುಣಾಕವಿತೆಯ ಚಿತ್ರಣ ಶಕ್ತಿಯ ಒಂದು ಮುಖವನ್ನು ನಾವೀಗ ನೋಡಿದ್ದೇವೆ. ಈ ಶಕ್ತಿಯ ಇನ್ನೊಂದು ಮುಖ ಕವಿಯು ಉಪಯೋಗಿಸಿರುವ ಉಪಮೆಗಳು. ಇಂತಹ ಉಪಮೆಗಳಿಂದ ಕವಿತೆಯು ತುಂಬಿದೆ. ಇವುಗಳಲ್ಲಿ ಹೆಚ್ಚಿನವು ಹೊಸ ರೀತಿಯ ಉಪಮೆಗಳು.

ವಾಸವದತ್ತೆಯ ಕಾತರತೆಯಿಂದ ಕೂಡಿದ ಕಣ್ಣುಗಳು ಹೀಗೆ ಚಿತ್ರಿತವಾಗಿವೆ :

"ತಿಳಿಯಾದ ನೀರುಳ್ಳ ಸ್ಫಟಿಕದ ಕುಪ್ಪಿಯಲ್ಲಿಟ್ಟ
ಪರಲ್* ಮೀನಿನಂತೆ ಆಕೆಯ ಕಣ್ಣುಗಳು
ತುಸುನಿಂತು ಅತ್ತಿತ್ತ ಚಲಿಸುತ್ತವೆ."

* ಪರಲ್ ಮೀನು ಕಪ್ಪು ಬಿಳಿ ಪರೆಗಳಿರುವ ನದೀಮೀನಿನ ಒಂದು ಜಾತಿ.

ಸ್ಮಶಾನದಲ್ಲಿದ್ದ ಆಲದಮರವು ಕವಿಗೆ ಕಾಣುವುದು ಹೀಗೆ:

"ತಲೆಯಲ್ಲ ಉರಿಗೊಳ್ಳಿಯುಳ್ಳ
ಸುಡುಗಾಡಿನಲ್ಲಿ ಉದ್ದಕ್ಕೆ ನಿಂತ ಭೂತದಂತೆ
ಅಲ್ಲಿ ಬಹು ದೊಡ್ಡ ಆಲದ ಮರವೊಂದು ನಿಂತಿದೆ."

ದೈವಲೀಲೆ ವಿಚಿತ್ರವಾದುದು. ಅದರ ಗತಿಯನ್ನು ತಕ್ಕಡಿಯ ಉಪಮೆಯಿಂದ ಕವಿಯು ಸೆರೆಹಿಡಿದಿದ್ದಾನೆ.

"ಹಾ! ಸುಖಗಳು ಬರಿಯ ಮಾಯಾಜಾಲ! ನಿಯತಿಯ
ತ್ರಾಸಿನ ತಕ್ಕಡಿಯು ಮೇಲೆ ಕೆಳಗೆ ಹೋಗುವುದನ್ನು
ಯಾರು ತಾನೇ ಹೇಳಬಲ್ಲರು!"

ಆಶೆಯು ಮನುಷ್ಯನನ್ನು ಮೂಢನನ್ನಾಗಿ ಮಾಡುವುದದೆಂತು?

"ಮೂಢನು ತನ್ನ ನಿದ್ದೆಯಲ್ಲಿ ಕ್ರೂರವಾದ
ಹೆಬ್ಬಾವಿನ ಸುರುಳಿಯನ್ನು ಗಾಳಿ ತುಂಬಿದ
ತಲೆದಿಂಬೆಂದು ತಿಳಿದುಕೊಳ್ಳುವನು."

ಇಂತಹ ಶಬ್ದಚಿತ್ರಗಳು ಕವಿತೆಯಲ್ಲಿ ಸಹಜತೆಯನ್ನುಂಟುಮಾಡಿ ಓದುಗರ ಮನಸ್ಸನ್ನು ಸೆಳೆಯುವವು.

ಕವಿತೆಯಲ್ಲಿರುವ ಭಾವಗೀತೆಯ ಗುಣ ಕರುಣೆಯನ್ನು ಚಿತ್ತಾಕರ್ಷಕವಾಗಿಸುವುದು ಅದರ ಇನ್ನೊಂದು ಮುಖ. ಅದನ್ನು ಮಂಚಿಪ್ಪಾಟ್ಟು ಅಥವಾ ದೋಣಿಯ ಹಾಡಿನ ಜನಪ್ರಿಯ ಜಾನಪದ ಗೀತದ ಛಂದಸ್ಸಿನಲ್ಲಿ ರಚಿಸಲಾಗಿದೆ. ಅದರ ಗೇಯತೆಯೇ ಮನಸ್ಸನ್ನು ಸುಲಭವಾಗಿ ಸೆರೆಹಿಡಿಯುತ್ತದೆ. ಕುಮಾರನ್ ಆಶಾನನು ಈ ಛಂದಸ್ಸಿನ ಹೆಚ್ಚಿನ ಪ್ರಯೋಜನವನ್ನು ಈ ಕವಿತೆಯಲ್ಲಿ ಪಡೆದಿರುವನು.

ಸಿದ್ಧಿಯನ್ನು ಪಡೆಯದ ಪ್ರೇಮವು ಆಶಾನನನ್ನು ಹೆಚ್ಚಾಗಿ ಆಕರ್ಷಿಸಿದೆ ಎಂದು ಕೆಲ ವಿಮರ್ಶಕರ ಅಭಿಪ್ರಾಯ. ಕರುಣೆಯನ್ನೊಳಗೊಂಡು ಆತನಿಂದ ರಚಿತವಾದ ಎಲ್ಲಾ ಭಾವಗೀತೆಗಳು ಈ ಅಭಿಪ್ರಾಯವನ್ನು ಪುಷ್ಟೀಕರಿಸುತ್ತವೆ. ವಾಸವದತ್ತೆಯು ಅಸುವನ್ನು ನೀಗುವ ತುಸುಮುಂಚೆ ಉಪಗುಪ್ತನು ಕಾಣಿಸಿಕೊಂಡುದು ಮರಣಶಯ್ಯೆಯಲ್ಲಿದ್ದವನಿಗಾಗಿ ದೇವರಿಗೆ ಪ್ರಾರ್ಥನೆಯನ್ನು ಸಲ್ಲಿಸುವವನಂತೆ ಎಂದು ಆ ವಿಮರ್ಶಕರ ಮತ. ಹೊಸ ಜನ್ಮವನ್ನು ಪಡೆದ ವಾಸವದತ್ತೆಗೆ ಈ ಲೋಕದಲ್ಲಿ ಪುನಃ ಜೀವಿಸುವ ಅವಕಾಶವನ್ನು ಕೊಟ್ಟಿರಬೇಕು ಎಂದು ಅವರೆನ್ನುತ್ತಾರೆ. ಅವರಿಗೆಲ್ಲಾ ಆಶಾನನ ಉತ್ತರ ಮೂಲಕಥೆಯಲ್ಲಿ ಉಪಗುಪ್ತನು ವಾಸವದತ್ತೆಗೆ ಕೊಟ್ಟ ಉತ್ತರವೇ ಆಗಬಹುದು. "ನಿನ್ನ ಹೃದಯವು ಬಾಹ್ಯಸುಖಗಳತ್ತ ತೆರೆದಿತ್ತು. ನೀನು ಅಸ್ಥಿರವಾದ ನಿನ್ನ ಯೌವನದೆಸಕವನ್ನು ನಂಬಿದ್ದೆ. ಹೀಗಿದ್ದುದರಿಂದ ಆಗ ನೀನು ತಥಾಗತನ ಉಪದೇಶಕ್ಕೆ ಕಿವಿಗೊಡುತ್ತಿರಲಿಲ್ಲ."

ಕೇರಳದಲ್ಲಿ ಪ್ರೇಮದ ದೈಹಿಕ ಆಕರ್ಷಣೆಗೆ ಕವಿತೆಯಲ್ಲಿ ಹೆಚ್ಚಿನ ಪ್ರಾಧಾನ್ಯ ಕೊಡುತ್ತಿದ್ದರು. ಹೀಗಿದ್ದಾಗ ಆಶಾನನು ಇದಕ್ಕಿಂತ ಭಿನ್ನವಾದ ಒಂದು ತತ್ವವನ್ನು ನಿರೂಪಿಸಬಯಸಿದನು. ನಿಜವಾದ ಪ್ರೇಮವು ನಿತ್ಯವೆಂಬುದನ್ನೂ ಅದರ ಸಿದ್ಧಿಯ ಪರಾಕಾಷ್ಠೆಯನ್ನು ಮರಣಾನಂತರದ ಜೀವನದಲ್ಲಿ ಅರಸಬೇಕೆಂಬುದನ್ನೂ ಆತನು ಜನತೆಗೆ ಮನಗಾಣಿಸಬೇಕೆಂದಿದ್ದನು. ಬುದ್ಧನಲ್ಲಿ, ಧರ್ಮದಲ್ಲಿ, ಸಂಘದಲ್ಲಿ ಶರಣು ಹೊಂದಿದವನಿಗೆ ನಿರ್ವಾಣವು ಲಭಿಸುವುದು. ಅತಿ ದೊಡ್ಡ ಪಾಪಿಗೂ, ತನ್ನ ದೈಹಿಕ ಜೀವನದ ಕೊನೆಯ ಕ್ಷಣದಲ್ಲಿಯೂ ನಿರ್ವಾಣವನ್ನು 'ಕರುಣೆ'ಯ ಮೂಲಕ ಪಡೆಯಲು ಸಾಧ್ಯ.

## 14. ಉಪಸಂಹಾರ

ಕೃತಿರಚನೆಯ ಅತ್ಯುಚ್ಚ ನೆಲೆಯಲ್ಲಿದ್ದಾಗ ಕ್ರೂರವಾದ ವಿಧಿಯು ಕುಮಾರನ್' ಆಶಾನನನ್ನು ಇಹಲೋಕದಿಂದ ಮಾಯವಾಗಿಸಿತು. ಆತನ ಕೊನೆಯು ಒಂದು ದೊಡ್ಡ ದುರಂತ. ಅದು ಅನಿರೀಕ್ಷಿತ, ಆಕಸ್ಮಿಕ. ಆಂಗ್ಲಕವಿ ಶೆಲ್ಲಿಯಂತೆ ಆಶಾನನೂ ನೀರಿನಲ್ಲಿಯೇ ಮರಣವನ್ನು ಹೊಂದಿದನು.

ಇದು ನಡೆದುದು 1924ರ ಜನವರಿ 16ರಲ್ಲಿ. ಆಶಾನನು ಆಲ್ವಾಯಿಗೆ, ತಿರುವನಂತಪುರದಿಂದ ಹದಿನೈದು ಮೈಲು ಉತ್ತರವಿದ್ದ ತೋನ್ನಕ್ಕಲಿನಿಂದ ಪ್ರಯಾಣಹೋಗಲು ಸನ್ನದ್ಧನಾದನು. ತೋನ್ನಕ್ಕಲಿನಲ್ಲಿ ಆತನಿಗೆ ಸುಮಾರು ಹದಿನೆಂಟು ಎಕ್ರೆಗಳ ಜಮೀನಿತ್ತು. ಆಲ್ವಾಯಿಯಲ್ಲಿ ಹಂಚಿನ ಕಾರ್ಖಾನೆಯ ಸಭೆಯೊಂದರಲ್ಲಿ ಆತನು ಭಾಗವಹಿಸಬೇಕಾಗಿತ್ತು. ಈ ಹಂಚಿನ ಕಾರ್ಖಾನೆಯಲ್ಲಿ ಆತನೂ ಒಬ್ಬ ಶೇರುದಾರನಾಗಿದ್ದನು. ಕ್ವಿಲೋನಿನಿಂದ ಆಲೆಪ್ಪಿಗೆ ಹೋಗುವ ಕೊನೆಯ ದೋಣಿಯನ್ನು ಆತನೇರಿದನು. ಕ್ವಿಲೋನಿನಿಂದ ಅದು ಹೊರಡುವಾಗಲೇ ಜನರಿಂದ ತುಂಬಿತ್ತು. ಪ್ರತಿಯೊಂದು ನಿಲುವಿನ ತಾಣದಲ್ಲಿಯೂ ಇನ್ನಷ್ಟು ಜನರು ಏರುತ್ತಲೇ ಇದ್ದರು. ಹೀಗೆ ಅಳತೆಗೆ ಮೀರಿದ ಜನರನ್ನು ತುಂಬಿಕೊಂಡ ಆ ದೋಣಿಯು ಅಷ್ಟಮುಡಿಯ ಕ್ಷುಭಿತ ತರಂಗಗಳ ಮಧ್ಯೆ ಹೋಗುತ್ತಿತ್ತು. ದೋಣಿಯಲ್ಲಿ ನಿದ್ರೆ ಹೋಗಲು ಅನುಕೂಲ ಇರಲಿಲ್ಲ. ಆದುದರಿಂದ ಆಶಾನನನ್ನು ಮೆಚ್ಚುತ್ತಿದ್ದ ಕೆಲ ಸಹೃದಯರು ಆತನೊಡನೆ ಕೆಲ ಕವಿತೆಗಳನ್ನು ಹಾಡಲು ಪ್ರಾರ್ಥಿಸಿದಾಗ ಆತನು ಸಂತೋಷದಿಂದ ಹಾಡಿದನು. ಶ್ರೀ ಬುದ್ಧಚರಿತದ ಐದನೇ ಸರ್ಗವನ್ನೂ ಕರುಣೆ ಎಂಬ ಕವಿತೆಯನ್ನೂ ಬರೆದಿದ್ದ ನೋಟುಪುಸ್ತಕವೊಂದು ಆತನ ಕೈಯಲ್ಲಿತ್ತು.

ಮಧ್ಯರಾತ್ರಿಯು ಕಳೆಯಿತು, ದೋಣಿಯು ಅಪಾಯಕರವಾದ ಪ್ರದೇಶ

ಗಳನ್ನೆಲ್ಲಾ ದಾಟಿತ್ತು. ಆದುದರಿಂದ ಸ್ವಲ್ಪ ನಿದ್ರೆಹೋಗಬಹುದೆಂದು ಆಲೋಚಿಸಿ ಆಶಾನನು ಕೆಳಗಿದ್ದ ಮೊದಲನೇ ತರಗತಿಯ ಪ್ರಯಾಣಿಕರ ಕೋಣೆಯೊಳಗೆ ಹೋದನು. ಅದು ಚಳಿಗಾಲದ ರಾತ್ರಿಯಾದುದರಿಂದ ಆಶಾನನು ತನ್ನ ಖಾದಿ ಕೋಟನ್ನು ತೆಗೆದಿಡಲಿಲ್ಲ. ತನ್ನ ತಲೆಯನ್ನು ಒಂದು ಉಣ್ಣೆಯ ಶಾಲಿನಿಂದ ಮುಚ್ಚಿಕೊಂಡು ಆತನು ನಿದ್ರಿಸಿದನು. ಆ ನಿದ್ರೆ ಆತನಿಗೆ ದೀರ್ಘನಿದ್ರೆಯಾಯಿತು. ದೋಣಿಯು ಪಲ್ಲಾನ ಎಂಬ ಸ್ಥಳದಲ್ಲಿ ಒಂದು ಸಣ್ಣ ಕಾಲುವೆಯಲ್ಲಿ ಒಡೆದು ಹೋಯಿತು. ಕ್ಷೋಭೆಗೊಂಡ ಸಮುದ್ರವಾದರೂ ಆಶಾನನು ಹೆದರುತ್ತಿರಲಿಲ್ಲ. ಆತನು ಒಳ್ಳೆಯ ಈಜುಗಾರ. ಆದರೆ ಈ ದುರಂತ ನಡೆದುದು ಒಂದು ಸಣ್ಣ ಕಾಲುವೆಯಲ್ಲಿ. 'ರಿಡೀಮರ್' (ರಕ್ಷಕ) ಎಂಬ ಹೆಸರುಳ್ಳ ದೋಣಿಯಲ್ಲಿ ಪ್ರಯಾಣ ಮಾಡುತ್ತಿದ್ದಾಗ. ಇದಕ್ಕಿಂತ ಹೆಚ್ಚು ವ್ಯಂಗ್ಯವಾದ ಹೆಸರಿದೆಯೇನು? ಆಶಾನನ ಶರೀರವು ಮರುದಿನ ತಾನೇ ಸಿಕ್ಕಿತಷ್ಟೆ. ಆತನ ಹಣೆಯ ಮೇಲೆ ಮಾತ್ರ ಒಂದು ಗಾಯವಿತ್ತು. ಈ ಗಾಯವನ್ನು ಮಾಡಿದ ಹೊಡೆತವೇ ಆತನ ಅಸುವನ್ನು ಅಪಹರಿಸಿರಬೇಕು ಎಂಬುದು ಸಹಜವಾದ ಒಂದು ಊಹೆ.

ಬಹುಶಃ ಆಶಾನನಿಗೆ ತನ್ನಂತ್ಯದ ಮುನ್ಸೂಚನೆ ಹೊಳೆದಿರಬೇಕು. ಅಥವಾ ಇದೂ ಒಂದು ಊಹೆ ಮಾತ್ರವಾದರೂ ಇರಬಹುದು. ಆತನು ಈ ದುರಂತಕ್ಕೆ ಸ್ವಲ್ಪದಿನಗಳ ಹಿಂದೆ ಕೊಟ್ಟಾಯದ ಸಂಕು ಎಂಬವನಿಗೆ ಬರೆದಿದ್ದ ಎರಡು ಪತ್ರಗಳೂ, ಆತನು ತಾನು ಎಣಿಸಿಕೊಂಡಿದ್ದಂತೆ ಕೊಟ್ಟಾಯದಲ್ಲಿ ನಡೆಯತಕ್ಕ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಲು ಸಾಧ್ಯವಾಗುವುದರ ಕುರಿತು ತನ್ನ ವೈಯಕ್ತಿಕ ಸಂದೇಹವನ್ನು ಸ್ಪಷ್ಟವಾಗಿ ಸೂಚಿಸುವುವು. ತಾನು ಆ ಪ್ರಯಾಣಕ್ಕೆ ತೊಡಗುವ ಮುಂಚೆ ತನ್ನ ಹೆಂಡತಿಯೊಡನೆ ತನ್ನಿಬ್ಬರು ಮಕ್ಕಳ ಭವಿಷ್ಯದ ಕುರಿತು ಮಾತನಾಡಿದ್ದುದೂ ಈ ಸಂದರ್ಭದಲ್ಲಿ ಮಹತ್ವಪೂರ್ಣವಾಗಿದೆ. ಇದಲ್ಲದೆ ಪ್ರಯಾಣಕ್ಕೆ ಮೊದಲು ಆತನು ತನ್ನ ಹೆಂಡತಿಯನ್ನು ಬೀಳ್ಕೊಂಡಿದ್ದನು. ಈ ರೀತಿ ಇದುವರೆಗೆ ಆತನು ಬೀಳ್ಕೊಂಡುದು ಇದ್ದಿಲ್ಲ.

ಆಶಾನನು ಮೃತಿಹೊಂದುವಾಗ ಆತನ ವಯಸ್ಸು ಐವತ್ತೊಂದು. ಆತನ ಹೆಂಡತಿಯ ವಯಸ್ಸು ಬರೀ ಇಪ್ಪತ್ತಮೂರು. ಅವರು ದಾಂಪತ್ಯ ಜೀವನವನ್ನು ನಡೆಸಿ ಏಳುವರ್ಷಗಳೂ ಪೂರ್ತಿಗೊಂಡಿರಲಿಲ್ಲ. ಅವರಿಗಿದ್ದ ಇಬ್ಬರು ಗಂಡು ಮಕ್ಕಳಲ್ಲಿ ಹಿರಿಯವನ ಪ್ರಾಯ ಐದು ವರ್ಷ. ಕಿರಿಯವನದು ಎರಡು ವರ್ಷ. ಮನೆಯ ಯಜಮಾನನ ಅಕಾಲನಿಧನದಿಂದ ಆ ಕುಟುಂಬವು ಎದುರಿಸಬೇಕಾಗಿದ್ದ ಪರಿಸ್ಥಿತಿಯನ್ನು ಯಾರೂ ಊಹಿಸಬಹುದು. ಈ ದೊಡ್ಡ ನಷ್ಟವಾದುದು ಆಶಾನನ ಕುಟುಂಬ, ಸಂಬಂಧಿಗಳು ಮತ್ತು ಸ್ನೇಹಿತರು, ಇವರಿಗೆ ಮಾತ್ರವಲ್ಲ. ಕೇರಳವಿಡೀ ಆತನ ನಿಧನದಲ್ಲಿ ಸಂತಾಪವನ್ನು ವ್ಯಕ್ತಪಡಿಸಿತು. ಹದಿನೈದು ವರ್ಷಕಾಲ ಕೃತಿ ರಚನೆಯನ್ನೂ ಇಪ್ಪತ್ತು ವರ್ಷಕಾಲ ಸಮಾಜ ಸೇವೆಯನ್ನೂ ಮಾಡಿದ ಆತನನ್ನು ಅಷ್ಟೊಂದು ಗೌರವದಿಂದ ಕಾಣುತ್ತಿತ್ತು ಜನತೆ.

ಕುಮಾರನ್ ಆಶಾನನ ಜೀವನ ಸಾಧನೆಗಳ ಸಂಪೂರ್ಣ ಚಿತ್ರಣವು ನಿಯಮಿತ

ವ್ಯಾಪ್ತಿಯುಳ್ಳ ಈ ಸಣ್ಣ ಕ್ಷೇತ್ರದಲ್ಲಿ ಕಷ್ಟ. ಕವಿಯ ವ್ಯಕ್ತಿತ್ವ ಬಹುಮುಖವಾದುದ ರಿಂದ ಆ ಕಷ್ಟ ಇನ್ನಷ್ಟು ಹೆಚ್ಚು. ಆತನು ಹೆಚ್ಚಾಗಿ ಅಂತರ್ಮುಖಿ. ಆತನು ತನ್ನ ಸ್ವಂತ ದಿನಚರಿಯಲ್ಲಿ ಬರೆದಿರುವ ವಿಷಯವೂ ಸಂಗ್ರಹವಾಗಿದ್ದು, ಇದ್ದುದು ಇದ್ದ ಹಾಗೆಯೇ ನಿರೂಪಿತವಾಗಿದೆ. ಭಾವಪರವಶತೆಯಲ್ಲಿ ಏನನ್ನಾದರೂ ಹೇಳಹೋಗುವ ವ್ಯಕ್ತಿಯಲ್ಲ ಆತ.

ಆತನ ವ್ಯಕ್ತಿತ್ವ ಸಮಗ್ರವಾದುದು. ಆತನು ಆತ್ಮಚಿಂತನೆಯ ವಿಷಯ ಬಹು ವಾಗಿ ಪ್ರಸ್ತಾಪಿಸುತ್ತಿದ್ದರೂ, ಶರೀರದ ಆರೋಗ್ಯದ ಕಡೆಗೆ ಅಲಕ್ಷ್ಯ ಮಾಡು ತ್ತಿರಲಿಲ್ಲ. ತೋಟದಲ್ಲಿ ಕೆಲಸಮಾಡುವುದೆಂದರೆ ಆತನಿಗೆ ಪ್ರೀತಿ. ಇಂತಹ ಶ್ರಮ ಕೆಲಸವನ್ನು ಮಾಡಲು ಸಾಧ್ಯವಿಲ್ಲದಿದ್ದಾಗ ತನ್ನ ಶರೀರವನ್ನು ಲಘುವಾಗಿಟ್ಟು ಕೊಳ್ಳಲು ಆತನು ಕ್ರಮಬದ್ಧವಾಗಿ ವ್ಯಾಯಾಮವನ್ನು ಮಾಡುತ್ತಿದ್ದನು. ಈ ವ್ಯಾಯಾಮಗಳಿಂದಲೂ ಆತನಿಗೆ 160 ಪೌಂಡುಗಳ ತನ್ನ ಶರೀರ ತೂಕವನ್ನು ಕಮ್ಮಿ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ಆತನ ಎತ್ತರಕ್ಕೆ ಆ ಭಾರದ ಪ್ರಮಾಣವು ತುಂಬಾ ಹೆಚ್ಚು. ಆದುದರಿಂದ ಆತನು 'ಕೂನಿ' ಪದ್ಧತಿಯನ್ನು ಅನುಸರಿಸಿದನು. ಇದು ಆತನ ತೂಕವನ್ನು ಒಮ್ಮೆಲೇ 100 ಪೌಂಡುಗಳಿಗಿಳಿಸಿತು. ಇದು ಆತನ ಸ್ನೇಹಿತರಲ್ಲಿ ಗಾಬರಿಯನ್ನು ಮಾಡಿತು. ಹೀಗೆ ಆಶಾನನು ತನ್ನ ಹಿಂದಿನ ರೀತಿಯನ್ನೇ ಪುನಃ ಅವಲಂಬಿಸಬೇಕಾಯಿತು. ಅವನು ಪ್ರಧಾನತಃ ಶಾಕಾಹಾರಿ. ಹೀಗಿದ್ದರೂ ಮಾಂಸಾಹಾರವನ್ನು ಆತನು ದ್ವೇಷಿಸುತ್ತಿರಲಿಲ್ಲ. ಆತನ ಹೆಂಡತಿಗೆ ಶಾಕಾಹಾರವನ್ನವ ಲಂಬಿಸಲು ಮನಸ್ಸಿತ್ತು. ಆದರೆ ಆಶಾನನು ಈ ವಿಷಯದಲ್ಲಿ ಆಕೆಯನ್ನು ಅನಾವಶ್ಯಕ ವಾಗಿ ನಿಯಮಿಸಲು ಇಷ್ಟಪಡಲಿಲ್ಲ.

ಆಶಾನನು ವಿವಿಧ ವಿಷಯಗಳನ್ನು ಆಳವಾಗಿ ತಿಳಿದ ಮನುಷ್ಯ. ಆದರೆ ಆತನ ಪತ್ನಿಯಾದ ಭಾನುಮತಿ ಅಮ್ಮನು ಸರಳ ಮುಗ್ಧ ಶಿಶುವಿನಂತೆ ಆತನು ಕೆಲಸಮಯ ವರ್ತಿಸುತ್ತಿದ್ದನು ಎಂದು ಹೇಳುತ್ತಾಳೆ. ಇದರಲ್ಲೇನೂ ಆಶ್ಚರ್ಯವಿಲ್ಲ. ಮಹಾ ಪುರುಷರ ಜೀವನದಲ್ಲಿ ಇಂತಹ ವರ್ತನೆಗಳನ್ನು ನಾವು ಆಗಾಗ ಕಾಣುತ್ತೇವೆ.

ಆಶಾನನ ಜೀವನ ತತ್ವವನ್ನೂ ಸಮಸ್ಯೆಗಳನ್ನು ಆತನು ಇದಿರಿಸುತ್ತಿದ್ದ ರೀತಿಯನ್ನೂ ಪರಿಶೀಲಿಸುವಾಗ ನಾವು ಪೂರ್ವಪಶ್ಚಿಮಗಳ ಅಪೂರ್ವ ಸಂಗಮವನ್ನು ಕಾಣುತ್ತೇವೆ. ಪಾಶ್ಚಿಮಾತ್ಯ ನಿಲುವಿನೊಡನೆ ಪೌರ್ವಾತ್ಯ ಯೌಗಿಕ ನಿಲವು ಉಚಿತ ಪ್ರಮಾಣದಲ್ಲಿ ಬೆರೆತಿರುವುದನ್ನು ನಾವು ಆತನಲ್ಲಿ ಕಾಣುವೆವು. ತೋರಿಕೆಗೆ ಈ ರೀತಿಯ ಪರಸ್ಪರ ವಿರೋಧವಿರುವ ನಿಲವುಗಳ ಉಚಿತಪ್ರಮಾಣದ ಬೆರಕೆಯೇ ಬಹುಶಃ ಆಶಾನನ ಮಹತ್ತಾದ ಯಶಸ್ಸಿಗೆ ಕಾರಣ. ಇದು ಹೇಗಿದ್ದರೂ, ಈ ಗುಣ ಆತನನ್ನು ಆತನ ಸಮಕಾಲೀನ ಕವಿಗಳಾದ ವಲ್ಲತ್ತೋಳ್ ನಾರಾಯಣ ಮೆನನ್, ಉಳ್ಳೂರ್ ಪರಮೇಶ್ವರ ಐಯ್ಯರ್ ಮೊದಲಾದ ಕವಿಗಳಿಗಿಂತ ಭಿನ್ನನನ್ನಾಗಿ ಮಾಡಿದೆ.

ಬೌದ್ಧಮತದತ್ತ ಆಶಾನನ ಒಲವಿರುವುದು ಆತನ ಕೃತಿಗಳಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಆದರೆ ಇದರಿಂದ ಆತನು ಬೌದ್ಧಮತವನ್ನು ಅಂಗೀಕರಿಸಿದ್ದನು ಎಂದರ್ಥ ಮಾಡುವುದು ಸರಿಯಲ್ಲ. ಆತನು ಪ್ರಪಂಚದ ವಿವಿಧ ಮತಗಳನ್ನು ಅಭ್ಯಾಸ

ಮಾಡಿದ್ದನೆಂಬುದು ನಿಜ. ಆತನಿಗೆ ಆಧ್ಯಾತ್ಮಿಕ ವಿಷಯದಲ್ಲಿ ತುಂಬಾ ಆಸಕ್ತಿ ಇತ್ತು. ಮಾತ್ರವಲ್ಲ, ಆತನ ಸಮಾಜವು ಜಾತಿಭೇದಗಳಿರುವ ಹಿಂದೂಮತದೊಳಗೆ ಉಳಿಯುವುದರ ಪ್ರಯೋಜನದ ಕುರಿತು ಸಂದೇಹಗಳನ್ನು ವ್ಯಕ್ತಪಡಿಸುತ್ತಿತ್ತು. ಅಂತಹ ಸಮಾಜದ ಮುಖಂಡರುಗಳಲ್ಲಿ ಆಶಾನನು ಒಬ್ಬನಾಗಿದ್ದ. ಇದೂ ಆತನ ವಿವಿಧ ಮತಾಭ್ಯಾಸದ ಆಸಕ್ತಿಗೆ ಕಾರಣ. ಈ ಶತಮಾನದ ಎರಡನೇ ದಶಕದಲ್ಲಿ, ಇಡೀ ಎಳವ ಸಮಾಜವು ಹಿಂದೂಧರ್ಮವನ್ನು ತ್ಯಜಿಸಿ ಜಾತಿಭೇದಗಳಿಲ್ಲದ ಯಾವುದಾದರೂ ಇತರ ಮತವನ್ನು ಸ್ವೀಕರಿಸಬೇಕೆಂದು ಕೇರಳದ ಕೆಲ ಎಳವ ಮುಖಂಡರು ಯೋಚಿಸಿದರು. ಕೆಲವರು ಕ್ರೈಸ್ತಮತಕ್ಕೆ ಸೇರಬಹುದೆಂದೂ, ಕೆಲವರು ಮುಸ್ಲಿಮ ಮತವನ್ನು ಅಂಗೀಕರಿಸಬಹುದೆಂದೂ, ಇನ್ನೂ ಕೆಲವರು ಬೌದ್ಧಮತವನ್ನು ಸ್ವೀಕರಿಸಬಹುದೆಂದೂ ಅಭಿಪ್ರಾಯಪಟ್ಟರು. ಆದರೆ ಹೆಚ್ಚಿನವರು ಈ ಮತಾಂತರವನ್ನು ಸಮರ್ಥಿಸಲಿಲ್ಲ. ಇಂತಹ ಗೊಂದಲದ ಪರಿಸ್ಥಿತಿಯಲ್ಲಿ ಆಶಾನನು ಸರಿಯಾದ ದಾರಿಯನ್ನು ತೋರಿಸಿದನು. ಆತನ ಅಭಿಪ್ರಾಯವು ತರ್ಕಬದ್ಧತೆಯಿಂದಲೂ ಸ್ಪಷ್ಟತೆಯಿಂದಲೂ ದೂರದೃಷ್ಟಿಯಿಂದಲೂ ಕೂಡಿತ್ತು. ಎಸ್, ಎನ್. ಡಿ. ಪಿ ಯೋಗದ 1923ರ ಆತನ ಅಧ್ಯಕ್ಷಭಾಷಣದಿಂದ ತೆಗೆದ ಕೆಳಗಿನ ಭಾಗವು ಇದನ್ನು ಸ್ಪಷ್ಟಪಡಿಸುವುದು.

"... ಜಾತಿನಿಯಮಗಳ ಬಂಧನದಿಂದ ಬಿಡುಗಡೆ ಹೊಂದಲು ಇತರ ಮತಕ್ಕೆ ಮತಾಂತರ ಹೊಂದುವ ಕುರಿತು ಈ ಯೋಗವು ಆಗಿಂದಾಗ ಪರಿಶೀಲಿಸಿದೆ. ಬೌದ್ಧ ಮತಕ್ಕೆ ಮತಾಂತರ ಹೊಂದುವ ವಿಷಯದ ಪರಿಶೀಲನೆಯು ಇತ್ತೀಚಿನದು. ಈ ಅಭಿಪ್ರಾಯವನ್ನು ಪ್ರತಿಪಾದಿಸಿದವರಲ್ಲಿ ಮುಖ್ಯನಾದವನು ನನ್ನ ಆಪ್ತಸ್ನೇಹಿತನೂ, ನಮ್ಮ ಸಮಾಜದ ಮುಖಂಡರುಗಳಲ್ಲಿ ಒಬ್ಬನೂ ಮಿತವಾದಿಯ ಸಂಪಾದಕನೂ ಆದ ಸಿ. ಕೃಷ್ಣನ್ ಎಂಬವನು. ನಮಗೆ ಆತನಲ್ಲಿ ಪ್ರೇಮವೂ ಗೌರವವೂ ಇರುವುದರಿಂದ ಆತನ ಅಭಿಪ್ರಾಯವನ್ನು ಗಂಭೀರವಾಗಿ ಪರಿಶೀಲಿಸಬೇಕಾಗಿದೆ. ವೈಯಕ್ತಿಕವಾಗಿ ಬೌದ್ಧಮತದ ವಿಷಯ ನನಗೇನೂ ಹೊಸತಲ್ಲ. ಅದರ ಧರ್ಮಮೋಕ್ಷಗಳ ಸಿದ್ಧಾಂತದ ಬಗ್ಗೆ ನನಗೆ ತುಂಬಾ ಗೌರವವಿದೆ. ಆದರೆ ಒಂದು ಅಂಗಿಯನ್ನು ಬದಲಾಯಿಸಿಬಿಡುವಂತೆ ಅನೇಕ ವರ್ಷಗಳಿಂದ ರೂಢಿ ಮಾಡಿಸಿಕೊಂಡ ಮಾನಸಿಕ ನಿಲವನ್ನು ಬದಲಾಯಿಸಲು ಸಾಧ್ಯವಿಲ್ಲ ಎಂಬುದು ನನ್ನ ನಮ್ರ ಅಭಿಪ್ರಾಯ. ಹೀಗೆ ಬದಲಾಯಿಸುವುದು ಮನಶ್ಶಾಸ್ತ್ರಕ್ಕೂ ಸರಿಹೊಂದುವುದಿಲ್ಲ, ಎರಡನೆಯದಾಗಿ, ಹೀಗೆ ಮತಾಂತರ ಹೊಂದಿದುದರಿಂದಾಗುವ ಭೌತಿಕ ಪ್ರಯೋಜನಗಳ ಬಗ್ಗೆ ನನಗೆ ನಂಬಿಕೆ ಇಲ್ಲ. ಮೂರನೆಯದಾಗಿ ವಿವಿಧ ಮನೋವೃತ್ತಿಗಳಿರುವ ಲಕ್ಷಾಂತರ ಜನಗಳಿಂದ ಕೂಡಿದ ಒಂದು ಸಮಾಜವು ಸಾಮೂಹಿಕವಾಗಿ ಇನ್ನೊಂದು ಮತಕ್ಕೆ ಮತಾಂತರ ಹೊಂದಲಾರದು. ಅಂತಹ ಮತಾಂತರದ ಹೆಜ್ಜೆಯು ಮೂರ್ಖತನವಾದೀತು. ಅದರಿಂದಾಗಿ ಸಮಾಜವು ತನ್ನ ಅಸ್ತಿತ್ವವನ್ನೇ ಕಳಕೊಂಡೀತು. ಇನ್ನೊಂದು ಮುಖ್ಯ ವಿಷಯ ಏನೆಂದರೆ ಈ ಮತಸಂಬಂಧವಾದ ವಿಷಯಗಳಲ್ಲಿ ನಮಗೆ ಸಲಹೆ ಕೊಡಬೇಕಾದುದು ನಾರಾಯಣಗುರುಗಳು. ಸಾಕಷ್ಟು ಮತತತ್ವದ

ಜ್ಞಾನ, ಅನುಭವಗಳಿರುವ ಅಂತಹ ವ್ಯಕ್ತಿಯು ಜೀವಂತವಿರುವಾಗ ಬೇರೆಡೆಯಲ್ಲಿ ಸಲಹೆ ಕೇಳಲು ಹೋಗುವುದು ಅವರಿಗೆ ನಾವು ಮಾಡುವ ಅವಮಾನ..."

'ಮತಪರಿವರ್ತನ ರಸವಾದ'ವೆಂಬ ಆಶಾನನು ಬರೆದ ಸಣ್ಣ ಪುಸ್ತಕದಲ್ಲಿ ಆತನ ಉತ್ತಮ ತರ್ಕಬದ್ಧ ಚಿಂತನೆಯನ್ನು ನೋಡುತ್ತೇವೆ. ಆಶಾನನು ಯಾವಾಗಲೂ ಜನಸಂದಣಿಯಲ್ಲಿ ಸೇರುತ್ತಿರಲಿಲ್ಲ. ಆತನು ಸ್ವತಂತ್ರ ಮನೋವೃತ್ತಿಯುವನು. ಹೀಗಾಗಿ ಆತನಿಗೆ ಏಕಾಂತತೆ ಹೆಚ್ಚು ಪ್ರಿಯವಾಗಿತ್ತು. ಇತರರು ಉದ್ವೇಗವನ್ನು ತೋರಿಸಿದರೆ ಈತನು ಶಾಂತತೆಯನ್ನು ಉಪದೇಶಿಸುತ್ತಿದ್ದ. ಈ ಮನೋವೃತ್ತಿಯನ್ನೇ ಮತಾಂತರದ ಬಗ್ಗೆ ಆತನು ತೋರಿಸಿದ ಪ್ರತಿಕ್ರಿಯೆಯಲ್ಲಿಯೂ ಕಾಣಬಹುದು. ಇತರರು ತಟಸ್ಥ ನೀತಿಯನ್ನು ಸಮರ್ಥಿಸಿದಾಗ ಆಶಾನನು ಕ್ರಾಂತಿಕಾರನಂತೆ ವರ್ತಿಸಿದನು. ಆತನ ಪ್ರಧಾನ ಕವಿತೆಗಳಲ್ಲಿ ನಾವು ಕಾಣುವುದು ಇದನ್ನೇ. ಭಾವನೆಗಳಲ್ಲಿಯೂ ತಂತ್ರದಲ್ಲಿಯೂ ಕ್ರಾಂತಿಕಾರಿತನವನ್ನು ನಾವು ಆತನಲ್ಲಿ ಕಾಣುವೆವು. ಕವಿತಾರಚನೆಯಲ್ಲಿ ಆಶಾನನು ಪಡೆದ ನಿಪುಣತೆ ಕ್ರಮಬದ್ಧವಾದ ಬೆಳವಣಿಗೆಯ ಫಲ. ಈ ಕಲೆಯಲ್ಲಿ ಆತನು ಪರಿಣತನೆಂಬುದನ್ನು 'ವೀಣಪೂವು' (ಬಿದ್ದಹೂವು) ಎಂಬ ಕವಿತೆಯು ದೃಢಪಡಿಸಿತು. ಇದು ಆತನ ಕವಿತಾಶಕ್ತಿಯು ಸ್ಥಿರವಾದ ಬೆಳವಣಿಗೆಯ ದಾಖಲೆಯಾಗಿದೆ. ಕವಿತೆಯ ಗುರಿ, ಆ ಗುರಿಯನ್ನು ಸಾಧಿಸತಕ್ಕ ಮಾರ್ಗಗಳ ಕುರಿತು ಆತನಲ್ಲಿ ತನ್ನದೇ ಆದ ಅಭಿಪ್ರಾಯಗಳಿದ್ದುವು. ಹೀಗೆಂದು ಸಂಪ್ರದಾಯವನ್ನು ಆತನು ಬಿಟ್ಟಿರಲಿಲ್ಲ. ಬೆಳವಣಿಗೆ ಮತ್ತು ಕ್ರಾಂತಿಗಳಿಂದ ಅಭಿವೃದ್ಧಿಯು ಸಾಧ್ಯವೆಂದು ಆತನು ನಂಬಿದ್ದನು. ಇವೆರಡೂ ಸಹಜೀವಿಸಲು ಸಾಧ್ಯ. 'ದುರವಸ್ಥೆ'ಯಲ್ಲಿ ಪ್ರತಿಪಾದಿಸಿದ ಸಮಾಜಕ್ರಾಂತಿಯು ಬಹು ತೀವ್ರವಾಗಿತ್ತು. ಅನೇಕರು ಅದರಿಂದ ನೊಂದುಕೊಂಡಿದ್ದರು. ಆಶಾನನು ಮನಃಪೂರ್ವಕವಾಗಿಯೇ ಆ ಅಭಿಪ್ರಾಯವನ್ನು ಕಥೆಯಲ್ಲಿ ನಿರೂಪಿಸಿದ್ದನು. ಆದರೆ ಸಾಮೂಹಿಕ ಮತಾಂತರದ ಪ್ರಶ್ನೆ ಎದುರು ಬಂದಾಗ ಆತನು ಸಾಮಾಜಿಕ ಕ್ರಾಂತಿಗೆ ಬೆಂಬಲ ಕೊಡದೆ ಸಹಜಪರಿವರ್ತನೆಯ ಮಾರ್ಗವನ್ನೇ ಅಂಗೀಕರಿಸಿದನು. ಕ್ರಾಂತಿಕಾರಿ ಭಾವನೆಗಳು ಹಬ್ಬಿದಾಗ ಮಾತ್ರ ಸಹಜಪರಿವರ್ತನೆಯು ಬೇಗನೆ ಆದೀತು ಎಂಬ ಭಾವನೆಯು ಬಹುಶಃ ಆತನಲ್ಲಿತ್ತು.

"ಮತ ನಿಯಮಗಳನ್ನು ನೀವು ಬದಲಾಯಿಸಿಕೊಳ್ಳಿರಿ,
ಇಲ್ಲದಿದ್ದರೆ ಮತ ನಿಯಮಗಳು ನಿಶ್ಚಯವಾಗಿಯೂ ನಿಮ್ಮನ್ನು
ಬದಲಾಯಿಸಿಯಾವು."

ಎಂದು ಆಶಾನನು ಸಮಾಜದ ಸಂಪ್ರದಾಯ ನಿಷ್ಠ ಮುಖಂಡರನ್ನು ಎಚ್ಚರಿಸಿದಾಗ ನಾವು ಆತನಲ್ಲಿ ಕ್ರಾಂತಿಕಾರ ಕವಿಯನ್ನು ಮಾತ್ರ ಕಾಣುವುದಲ್ಲ; ಒಬ್ಬ ದೊಡ್ಡ ಪ್ರವಾದಿಯನ್ನೂ ಕಾಣುತ್ತೇವೆ. ಸಮಾಜವನ್ನೆಚ್ಚರಿಸಿದ ಆತನ ಈ ಕರೆಯಿಂದ ಆತನು ತನ್ನ ಕಾಲದವರಿಗಿಂತ ಅಭಿಪ್ರಾಯಗಳಲ್ಲಿ ಬಹಳ ಮುಂದುವರಿದಿದ್ದನು ಎಂಬುದು ಸುವಿದಿತವಾಗುತ್ತದೆ. ನಾವು ಸಮಕಾಲೀನ ಚರಿತ್ರೆಯಲ್ಲಿ ಏನನ್ನು ಕಂಡಿದ್ದೇವೆ? ಮತನಿಯಮಗಳು ವಿಶೇಷವಾದ ಬದಲಾವಣೆಯನ್ನು ಹೊಂದಿವೆ. ಅಥವಾ ಆ ಹಳೆಯ

ಮತನಿಯಮಗಳನ್ನು ಪ್ರತಿಪಾದಿಸುತ್ತಿದ್ದವರು ಮೂಲೆಗೊತ್ತಲ್ಪಟ್ಟಿದ್ದಾರೆ, ಹೀಗೆ ಆಶಾನನು ಸಾಹಿತ್ಯರಂಗದಲ್ಲಿಯೂ ಸಾಮಾಜಿಕ ರಂಗದಲ್ಲಿಯೂ ಕ್ರಾಂತಿಯ ಬೀಜಗಳನ್ನು ಬಿತ್ತಿದನು. ಕಳೆದ ನಾಲ್ಕು ದಶಕಗಳು ಆಶಾನನ ಅಭಿಪ್ರಾಯಗಳು ಅದೆಷ್ಟು ಸರಿಯಾಗಿದ್ದುವು ಎಂಬುದನ್ನೂ, ತಟಸ್ಥನೀತಿಯನ್ನು ಪ್ರತಿಪಾದಿಸುತ್ತಿದ್ದವರ ಅಭಿಪ್ರಾಯಗಳು ಎಷ್ಟು ಹಾಸ್ಯಾಸ್ಪದವಾಗಿ ಈಗ ತೋರುತ್ತಿವೆ ಎಂಬುದನ್ನೂ ನಿದರ್ಶಿಸುತ್ತವೆ.

ಆಶಾನನ ಸಮಗ್ರ ಜೀವನವನ್ನು ಅವಲೋಕಿಸುವಾಗ ಎಲ್ಲವೂ ಅವನಿಗೆ ದೊರೆತುದು ತಡವಾಗಿ ಎಂಬುದನ್ನು ಕಾಣುತ್ತೇವೆ. ಇದಕ್ಕೆ ಅಪವಾದ ಅವನ ಮರಣವೊಂದೇ. ಅದೊಂದು ಬಹುಬೇಗ ಬಂದು ಬಿಟ್ಟಿತು. ಕವಿತಾರಚನೆ ಆತನಿಗೆ ಸಿದ್ಧಿಸಿದುದು ತಡವಾಗಿ. 'ಬಿದ್ದ ಹೂವು' ಎಂಬ ಕವಿತೆಯನ್ನು ಆತನು ಬರೆಯುವಾಗ ಆತನ ಪ್ರಾಯ ಮೂವತ್ತೈದು. ಸಾಹಿತ್ಯ ಕ್ಷೇತ್ರದಲ್ಲಿ ಆತನೂ ಒಬ್ಬ ಸಾಹಿತಿಯೆಂದು ಪರಿಗಣಿಸಲ್ಪಟ್ಟುದೂ ತಡವಾಗಿಯೇ. ನಲವತ್ತೈದನೇ ವರ್ಷದಲ್ಲಿ ನಡೆದ ಆತನ ಮದುವೆಯೂ ಸಂಭವಿಸಿದುದು ಬಹು ತಡವಾಗಿ. ಆತನು ಕವಿತಾರಚನೆಯಲ್ಲಿ ಸಿದ್ಧಿವಡೆದುದು ತಡವಾಗಿಯೇ.

ಆತನ ಪ್ರತಿಯೊಂದು ಕವಿತೆಯೂ ಅಬಲೆಯರೆಂದು ಕರೆಯಲ್ಪಡುವ ಸ್ತ್ರೀಯರನ್ನೇ ಕೇಂದ್ರವಾಗಿಟ್ಟುಕೊಂಡಿದೆ. ಹಿಂದುಳಿದವರಿಗಾದ ಅನ್ಯಾಯಗಳನ್ನು ಜನತೆಗೆ ಮನದಟ್ಟಾಗಿಸುತ್ತದೆ. ರಮ್ಯಪ್ರೇಮದ ಭಾವನೆಯನ್ನು ಆತನು ಸಂವರ್ಧಿಸಿದ್ದಾನೆ. ಹೆಂಗಸಿನ ಸ್ಥಾನಮಾನಗಳನ್ನು ಹೆಚ್ಚಿಸಿದ್ದಾನೆ. ಪ್ರೇಮಿಗಳನ್ನು ತನ್ನ ಕವಿತೆಯಲ್ಲಿ ನರಿಸಮರಾಗಿಸಿದ್ದಾನೆ. ಈ ದೃಷ್ಟಿಯಲ್ಲಿ ಆತನು ಆಂಗ್ಲಕವಿ ಶೆಲ್ಲಿಯನ್ನು ಹೋಲುತ್ತಾನೆ. ಮಲಯಾಳ ಪದ್ಯ ಸಾಹಿತ್ಯದ ಪುನರುತ್ಥಾನದ ಮುಂದಾಳು ಕುಮಾರನ್ ಆಶಾನನು.

ಈ ಮಹಾಕವಿಯ ಸ್ಮಾರಕವನ್ನು ಸ್ಥಾಪಿಸುವಲ್ಲಿ ಕೇರಳ ಸರಕಾರವೂ ಸಾರ್ವಜನಿಕರೂ ಕೆಲವರ್ಷಗಳಿಂದ ಸಾಕಷ್ಟು ಉತ್ಸಾಹವನ್ನು ತೋರಿಸುತ್ತಿದ್ದಾರೆ. ಆತನ ಹುಟ್ಟೂರಾದ ಕಾಯಿಕ್ಕರದಲ್ಲಿ ಆತನ ಸ್ಮಾರಕಾರ್ಥವಾಗಿ ಒಂದು ದೊಡ್ಡ ಸಭಾಂಗಣವನ್ನು ಇತ್ತೀಚೆಗೆ ರಚಿಸಿದ್ದಾರೆ. ಅಲ್ಲಿಯ ಕಡಲಕರೆಯಲ್ಲಿ ಪ್ರತಿವರ್ಷ ಮೂರು ದಿನಗಳ ಸಾಹಿತ್ಯ ಸಂಸ್ಕೃತಿ ಸಮ್ಮೇಳನವನ್ನು ಜರಗಿಸುತ್ತಾರೆ. ಅದರಲ್ಲಿ ಲೇಖಕರೂ ಕಲಾವಿದರೂ ಭಾಗವಹಿಸುತ್ತಾರೆ. ಆಶಾನನು ತನ್ನ ಜೀವನದ ಕೊನೆಯ ಮೂರು ವರ್ಷಗಳನ್ನು ಕಳೆದ ತೋನ್ನಕ್ಕಲ್ ಎಂಬ ಊರಿನಲ್ಲಿ ಕೇರಳ ಸರಕಾರವು ಇನ್ನೊಂದು ಸ್ಮಾರಕವನ್ನು ರಚಿಸಿದೆ. ಆಶಾನನು ಉಪಯೋಗಿಸಿದ ವಸ್ತುಸಾಮಗ್ರಿಗಳನ್ನೂ ಆತನ ಕೈಬರಹದ ಪುಸ್ತಕಗಳನ್ನೂ ಅಲ್ಲಿ ಪ್ರದರ್ಶನಕ್ಕಿಡಲಾಗಿದೆ. ಆತನು ಮುಳುಗಿ ಗತಿಸಿದ ಪಲ್ಲನಂ ಎಂಬಲ್ಲಿ ಆತನ ನೆನಪಿಗಾಗಿ ಒಂದು ಸ್ಮಾರಕ ಕಟ್ಟಡವೂ ಒಂದು ಶಾಲೆಯೂ ಇವೆ. ಆ ಸ್ಥಳಕ್ಕೆ 'ಕುಮಾರಕೊಡಿ' ಎಂಬ ಹೆಸರನ್ನಿಟ್ಟಿದ್ದಾರೆ. ತಿರುವನಂತಪುರದಲ್ಲಿ ಶಾಸನಸಭಾ ಸದಸ್ಯರ ವಸತಿಗೃಹದ ಪಕ್ಕದ ಕೇರಳ ವಿಶ್ವವಿದ್ಯಾನಿಲಯದ ಕಾರ್ಯಾಲಯದ ಇದಿರಿನಲ್ಲಿ, ಈ ಮಹಾಕವಿಯ ಪೂರ್ಣ

ಪ್ರಮಾಣದ ಪ್ರತಿಮೆಯೊಂದನ್ನು ಸ್ಥಾಪಿಸಲು ಸ್ವಲ್ಪ ಸ್ಥಳವನ್ನು ಪ್ರತ್ಯೇಕವಾಗಿ ಕಾದಿರಿಸಿದೆ. ಪ್ರತಿಮೆಯ ಸ್ಥಾಪನೆಯು ಬೇಗನೇ ಆಗುವ ನಿರೀಕ್ಷೆ ಇದೆ.

ಕೇರಳ ರಾಜ್ಯದ ಒಳಗೂ ಹೊರಗೂ ಅನೇಕ ಎಡೆಗಳಲ್ಲಿ ಕುಮಾರನ್ ಆಶಾನನ ಹೆಸರಲ್ಲಿ ಸಂಸ್ಥೆಗಳನ್ನೂ ಶಾಲೆಗಳನ್ನೂ ಸ್ಥಾಪಿಸಿದ್ದಾರೆ. ಇವುಗಳಲ್ಲಿ ಮುಖ್ಯವಾದುದು ಮದ್ರಾಸಿನ ಆಶಾನ್ ಸ್ಮಾರಕಶಾಲೆ ಎಂಬುದು. ಈ ಮಹಾಕವಿಯು ಇನ್ನೂ ಹೆಚ್ಚಿನ ಸ್ಮಾರಕಗಳಿಗೆ ಅರ್ಹನಾಗಿದ್ದಾನೆ. ಈ ಮಹಾಕವಿಯ ಪ್ರೇಮಿಗಳು ರಚಿಸಬಹುದಾದ ಎಲ್ಲಾ ಸ್ಮಾರಕಗಳಿಗಿಂತ ಬಹುಕಾಲ ಬಾಳುವ, ವಿಶೇಷ ಸ್ಫೂರ್ತಿಯನ್ನು ಕೊಡುವ ಸ್ಮಾರಕವೆಂದರೆ ಆತನ ಸ್ವಂತ ಕೃತಿಗಳೇ. ಅವು ನಮ್ಮೊಡನೆ ಎಂದೆಂದೂ ಮಾತಾಡಬಲ್ಲವು. ನಾವು ಸದಾ ಅವುಗಳಿಂದ ಸ್ಫೂರ್ತಿಯನ್ನು ಪಡೆಯಬಹುದು.

# ಆಧಾರ ಗ್ರಂಥಸೂಚಿ


| | |
|---|---|
| ಕೇಶವನ್, ಸಿ. ಒ. | ಮಹಾಕವಿ ಕುಮಾರನ್ ಆಶಾನ್ |
| ಸುರೇಂದ್ರನ್, ಕೆ. | ಕುಮಾರನ್ ಆಶಾನ್ |
| ಪಣಿಕ್ಕರ್, ಕೆ. ಕೆ. | ಶ್ರೀ ನಾರಾಯಣ ಪರಮಹಂಸನ್ |
| ಜನಾರ್ದನ ಮೆನನ್, ಕಂನ್ನತ್ತೂರ್ | ಮಹಾಕವಿ ಕುಮಾರನ್ ಆಶಾನ್ |
| ಮುಂಡಶ್ಶೆರಿ, ಜೋಸೆಫ್, | ಆಶಾನ್, ಒರು ಪಠನಮ್ |
| ,, | ಮನುಷ್ಯ ಕಥಾನುಗಾಯಿಕಳ್ |
| ,, | ಮಾಟ್ಟೊಲಿ |
| ಡೇನಿಯಲ್, ಕೆ. ಎಮ್. | ವೀಣ ಪೂವು ಕಣ್ಮುಂಬಿಲ್ |
| ಜೋರ್ಜ್, ಕೆ. ಎಮ್. | ಮುಂತಿರಿ ಚಾರು |
| ಕುಟ್ಟಿಕೃಷ್ಣ ಮಾರಾರ್ | ರಾಜಾಂಕಣಂ |
| ಗೋಪಾಲ ಪಿಳ್ಳೆ, ಎನ್. | ಚಿಂತಾದೀಪಂ |
| ಕುಮಾರನ್ ಆಶಾನ್ | ನಿರೂಪಣಂಗಳ್ |
| ಬಾಲಕೃಷ್ಣನ್. ಪಿ. ಕೆ. | ಕಾವ್ಯಕಲಾ ಕುಮಾರನ್ ಆಶಾನಿಲೋಡೆ |


# ಕೃತಿ ಸಂಗ್ರಹಗಳು


ಕಂಪ್ಲೀಟ್ ವರ್ಕ್ಸ್ ಆಫ್ ಕುಮಾರನ್ ಆಶಾನ್.

(ಕುಮಾರನ್ ಆಶಾನನ ಸಮಗ್ರ ಕೃತಿಗಳು)—(3 ಸಂಪುಟಗಳು).

ಆಶಾನ್ ಸ್ಮಾರಕ ಗ್ರಂಥಂ.

ಆಶಾನ್ ಸೂವೆನೀರ್ (1958).

ಕುಮಾರನ್ ಆಶಾನ್ಡೆ ಕವಿತಾ (ಕವಿತಾ ಸಮಿತಿ).

ಆಶಾನ್ (ವಿಮರ್ಶಾತ್ಮಕ ಪ್ರಬಂಧಗಳು).

ಆಶಾನ್ ಕವಿತಾ (ಆಶಾನ್ ಅಕಾಡೆಮಿ, ತ್ರಿವೆಂಡ್ರಮ್).